ಪ್ರಾಕ್-ಸಾಹಿತ್ಯ ಮಾಲೆ: ೫

K. S. Anantha krishna

# ಚತುರಾಸ್ಯ ನಿಘಂಟು

೧೫ನೆಯ ಶತಮಾನದ ಕವಿ ರಚಿಸಿದ
ತತ್ಸಮ-ತದ್ಭವ ಹಾಗು ಸಮಾನಾರ್ಥದ
ದೇಸಿ ಪದಗಳ ಛಂದೋಬದ್ಧ ನಿಘಂಟು.

ಸಂಪಾದಕರು :
ಕಾವ್ಯಪ್ರೇಮಿ

ಪ್ರಕಾಶಕರು :
ಪ್ರತಿಭಾ ಗ್ರಂಥಮಾಲೆ, ಧಾರವಾಡ.

ಪ್ರಾಕ್-ಸಾಹಿತ್ಯಮಾಲೆ : ೫

K. S. Anantha Krishna

# ಚತುರಾಸ್ಯ ನಿಘಂಟು

೧೫ನೆಯ ಶತಮಾನದ ಕವಿ ರಚಿಸಿದ
ತತ್ಸಮ-ತದ್ಭವ ಹಾಗು ಸಮಾನಾರ್ಥದ
ದೇಸಿ ಪದಗಳ ಛಂದೋಬದ್ಧ ನಿಘಂಟು.

ಸಂಪಾದಕರು :
ಕಾವ್ಯಪ್ರೇಮಿ

ಪ್ರಕಾಶಕರು :
ಪ್ರತಿಭಾ ಗ್ರಂಥಮಾಲೆ, ಧಾರವಾಡ.

## ಪ್ರಾಕ್‌-ಸಾಹಿತ್ಯ ಮಾಲೆಯ ಪ್ರಕಟಣೆಗಳು

★




ಪ್ರಕಾಶಕರು : ಪ್ರತಿಭಾ ಗ್ರಂಥಮಾಲೆ, ಧಾರವಾಡ-೫೮೦೦೦೧.

ಮುದ್ರಕರು : ಪ್ರತಿಭಾ ಮುದ್ರಣ, ಧಾರವಾಡ-೫೮೦೦೦೧.

ಪ್ರಥಮ ಮುದ್ರಣ : ೧೯೬೪ :: ಬೆಲೆ : ರೂ. ೨-೦೦


## ಕವಿ : ಕೃತಿ

ಚತುರಾಸ್ಯನಿಘಂಟಿನ ಕರ್ತೃ ಚತುರಾಸ್ಯ ಬೊಮ್ಮರಸ. ಇವನ ಕಾಲ ಸು. ೧೪೫೦ ಎಂದು ಕವಿಚರಿತಕಾರರು ಊಹಿಸಿದ್ದಾರೆ. ಕವಿಯ ಬಗೆಗಿನ ಕವಿಚರಿತೆಕಾರರ ಊಹೆ ಇಂತಿದೆ :

" ಇವನು ವೀರಶೈವ ಕವಿಯೆಂದು ತೋರುತ್ತದೆ. ಇವನಿಗೆ ಚತುರಾನನ, ಚತುರಾಸ್ಯ ಎಂಬ ಹೆಸರುಗಳೂ ಉಂಟು. ಗಗನಾನ್ವಯತಿಲಕನಾದ ಹಂಪರಸನ ಮಗ ತಿಪ್ಪರಸನೆಂಬ ಬ್ರಾಹ್ಮಣನ ಇಷ್ಟಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ (ಪೀಠಿಕೆಯ ನಾಲ್ಕನೆಯ ಪದ್ಯದಲ್ಲಿ). ಅಚ್ಚಾಗಿರುವ ಚತುರಾಸ್ಯ ನಿಘಂಟುವಿನಲ್ಲಿ ದೊರೆವ "ಸಂತಸದಿ ನಚಿಪಿದಂ ಕವಿ | ಚಿಂತಾಮಣಿಯೆನಿಪ ಸರಸಕವಿ ತಿಪ್ಪರಸಂ " ಎಂಬ ಪದ್ಯಭಾಗದಿಂದ ( ಪದ್ಯ : ೧೩೩ ) ಈ ತಿಪ್ಪರಸನೂ ಈ ಗ್ರಂಥರಚನೆಗೆ ಸಹಾಯಕನಾಗಿದ್ದಂತೆ ತೋರುತ್ತದೆ. ಕವಿಯ ಕಾಲವನ್ನು ನಿರ್ಧರಿಸುವುದಕ್ಕೆ ಸರಿಯಾದ ಆಧಾರವಿಲ್ಲ. ಸೌಂದರಪುರಾಣವನ್ನು ಬರೆದ ಬೊಮ್ಮರಸನೂ ( ಸು. ೧೪೫೦ ) ಒಬ್ಬ ತಿಪ್ಪರಸನ ಇಷ್ಟಾನುಸಾರವಾಗಿ ಆ ಗ್ರಂಥವನ್ನು ಬರೆದಂತೆ ಹೇಳುತ್ತಾನೆ. ಆದರೆ ಆ ತಿಪ್ಪರಸನು ವೈಶ್ಯಕುಲತಿಲಕನಾದ ಕಾಮನೃಪನ ಮಗನೆಂದು ಹೇಳಿರುವುದರಿಂದ ಕವಿ ಆ ಬೊಮ್ಮರಸನಲ್ಲವೆಂದು ತೋರುತ್ತದೆ. ಆದರೂ ಇವನ ಕಾಲವು ಸುಮಾರು ೧೪೫೦ ಆಗಿರಬಹುದೆಂದು ಊಹಿಸುತ್ತೇನೆ. " [ ಆರ್. ನರಸಿಂಹಾಚಾರ್ಯ: ಕರ್ಣಾಟಕ ಕವಿಚರಿತೆ, ಭಾಗ : ೧; ಪುಟ : ೫೦-೫೧ ]

ಈ ನಿಘಂಟು ಕಂದಪದ್ಯಗಳಲ್ಲಿದೆ. ತತ್ಸಮ-ತದ್ಭವಗಳನ್ನೂ ಸಮಾನಾರ್ಥದ ದೇಸಿ ಪದಗಳನ್ನೂ ಕವಿ ಛಂದೋಬದ್ಧವಾಗಿ ಪವಣಿಸಿದ್ದಾನೆ. ಪ್ರತಿ ಪದ್ಯವೂ ' ಚತುರಾಸ್ಯ ' ಎಂಬ ಮುದ್ರಿಕೆಯಿಂದ ಕೊನೆಗೊಳ್ಳುತ್ತದೆ.

## ಸಂಪಾದಕೀಯ

ಬಹುದಿನಗಳಿಂದ ಅಲಭ್ಯವಿರುವ ಈ ನಿಘಂಟಿನ ಪ್ರಕಟಿತ ಆವೃತ್ತಿಗಳನ್ನು ಪರಿಶೀಲಿಸಿ, ಇದೀಗ ಈ ಗ್ರಂಥವನ್ನು ಪರಿಷ್ಕರಿಸಿ ಕನ್ನಡಿಗರ ಕೈಗೆ ಇಡಲು ಸಂತೋಷಿಸುತ್ತೇನೆ. ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸುವುದಕ್ಕೂ, ಕನ್ನಡ ವಿದ್ಯಾರ್ಥಿಗಳ ಅನುಕೂಲಕ್ಕಾಗಿಯೂ ಗ್ರಂಥದ ಕೊನೆಯಲ್ಲಿ, ಕವಿಯು ತನ್ನ ಈ ಗ್ರಂಥದಲ್ಲಿ ಹೇಳಿರುವ, ತತ್ಸಮ-ತದ್ಭವ ಹಾಗು ಸಮಾನಾರ್ಥದ ದೇಸಿ ಪದಗಳನ್ನು ಪ್ರತ್ಯೇಕವಾಗಿ ಪಟ್ಟಿ ಮಾಡಿ ಕೊಟ್ಟಿದ್ದೇನೆ. ಪ್ರಾಚೀನ ಕನ್ನಡಸಾಹಿತ್ಯದ ಅಭ್ಯಾಸಿಗಳು ಈ ನಿಘಂಟಿನ ಉಪಯೋಗವನ್ನು ಕೆಲಮಟ್ಟಿಗಾದರೂ ಮಾಡಿಕೊಳ್ಳುವರೆಂದು ನಂಬಿದ್ದೇನೆ.

— ಕಾವ್ಯಪ್ರೇಮಿ

K. S. Ananthakrishna

# ಚತುರಾಸ್ಯ ನಿಘಂಟು

---

### ಪೀಠಿಕೆ

ಕಂ || ಶ್ರೀಮದ್ಗಿರಿಜಾತಾನನ |
ತಾಮರಸಮಧುಪ್ರಮೋದಭೃಂಗಂ ದೇವೋ ||
ದ್ದಾಮಂ ಕೃಪೆಯಿಂದೆನಗೆ ಮ |
ನೋಮುದಮಂ ಪಂಪೆಯಾಳ್ದನೀಗನವರತಂ || ೧ ||

ಇಂತೆಂದು ನಮಿಸಿ ಕನ್ನಡ |
ದೆಂತಪ್ಪುವು ಶಬ್ದಮೆಂಬ ವಿದ್ವಜ್ಜನರಾ ||
ಚಿಂತೆ ಪರಿಹರಿಪಮಾಟಕ್ಕೆಯೊ |
ಳಿಂತುಸಿರ್ವೆಂ ದೇಸಿ ತದ್ಭವಂ ತತ್ಸಮಮಂ || ೨ ||

ಕವಿಚತುರಾನನೆಂದೆನಿ |
ಸುವ ನಾಮದೆ ದೇಸಿ ತದ್ಭವಂ ತತ್ಸಮಮಂ ||
ಬಿವಱಿಂದಮಚ್ಚಗನ್ನಡ |
ವಿವರಣೆ ಚೆಲ್ವಾಗೆ ರಚಿಸಿದೆಂ ಚತುರಾಸ್ಯಂ || ೩ ||

ನೆಲದಮುರ್ದುಣಿ ಗಗನಾನ್ವಯು |
ತಿಲಕಂ ಹಂಪರಸಸೂನು ತಿಪ್ಪರಸಂ ಪೇ ||
ಟಿಲೆ ಚತುರಾನನ ಎನಲಾಂ |
ಘಟಿಲನೆ ಕರ್ನಾಟಕಾಭಿಧಾನಮನುಸಿರ್ದಂ || ೪ ||

* * * *

ಪೊಂಬಸಿಱಿಂ ನುಡಿವೆಣ್ಣಾ |
ಣ್ಮಂ ಬೊಮ್ಮಂ ಬೇದಬಿಜ್ಜೆಗಂ ತಾವರೆಗಂ ||
ದಂ ಬಿದಿ ನಾಲ್ಮೊಗನಜನೆಂ |
ದೆಂಬ ಪೆಸರ್ಗಳಿಗೆ ಕೋವಿದರ್ಚತುರಾಸ್ಯ || ೫ ||

ಪೆಱೆದಲೆಯಂ ಮಾದೇವಂ |
ಕಱಿಗೊರಲಂ ತಿಸುಳಿಯ್ಯೆಮೊಗಂ ಸಾಂತಂ ಬಾಂ ||
ದೊಱೆದಲೆಯಂ ಪಣೆಗಣ್ಣಂ |
ತಱಿಸಂದುಮೆಯಾಣ್ಮನೆಂದು ತಿಳಿ ಚತುರಾಸ್ಯ || ೬ ||

ರಕ್ಕಸವಗೆಯಂ ಮುನ್ನೀ |
ರ್ವಕ್ಕೆಗನಿಂಗಡಲಕುವರಿಯೆಱೆಯಂ ನೀರ್ದ್ಯೂ ||
ವೊರ್ಕುಳನಲರ್ಗಣ್ಣಂ ಹರಿ |
ಯಕ್ಕುಂ ಕಾಱೊಡಲನೆಂದು ತಿಳಿ ಚತುರಾಸ್ಯ || ೭ ||



ಆರಾಮಮೆ ಆರವೆ ತಾಂ |
ಹಾರಮೆ ಆರಂ ಕುಮಾರನೆನೆ ಕುವರಂ ಕ ||
ಸ್ತೂರಿಯೆನಲ್ಕತ್ತುರಿ ಕ |
ರ್ಪೂರಂ ಕಪ್ಪುರಮದಕ್ಕುಮೆಲೆ ಚತುರಾಸ್ಯ || ೮ ||

ಪೊಂಪಮೆನಲ್ ಸಮುಭಾಗಂ |
ಜೊಂಪಮೆನಲ್ ತೊಂಬೆ ಮಱವೆಯೆನೆ ಮತ್ತತ್ವಂ ||
ಪೊಂಪುಳಿಯೆನೆ ಪುಳಕಾಖ್ಯಮು |
ಲಂಪೆನೆ ವಿಭವಾರ್ಥಮಪ್ಪುದೆಲೆ ಚತುರಾಸ್ಯ || ೯ ||

ಕುಳಿರ್ವೆಟ್ಟೈಕಿಲ್ವೆಟ್ಟುಂ |
ಚಳಿವೆಟ್ಟು ಹಿಮಾದ್ರಿಯೆಲರೆನಲ್ಪವನಂ ಬಾಂ ||
ಬೊಳೆಯೆನೆ ಮಂದಾಕಿನಿ ತ |
ಣ್ಬುಳಿಲೆನೆ ಸೈಕತಮೆನಿಪ್ಪುದೆಲೆ ಚತುರಾಸ್ಯ || ೧೦ ||

ನಿಸದಂ ನಿಕ್ಕುವಮೆಂಬೀ |
ಪೆಸೆಱಿಂ ಸತ್ಯಕ್ಕೆ ಸಾಸಮೆಂಬ ಪೆಸರ್ಸಾ ||
ಹಸಮಪ್ಪು ದು ಕೈಗಳಿದುದ |
ದಸಕಳಿದುದೆನಿಪ್ಪ ನಾಮಮೆಲೆ ಚತುರಾಸ್ಯ || ೧೧ ||

ಜತ್ತುಕಮೆನೆ ಕೈತವಮೆರ್ದೆ |
ವತ್ತಿದುದೆನೆ ಚಿತ್ತದಲ್ಲಿ ನೆಲೆಗೊಂಡುದು ಮೇಣ್ ||
ಬಿತ್ತರಮೆನೆ ವಿಸ್ತಾರಮು |
ದುತ್ತರಿಗೆಯೆನಲ್ಕುತ್ತರೀಯಕಂ ಚತುರಾಸ್ಯ || ೧೨ ||

ಜಗುನೆಯೆ ಯಮುನೆ ದುಕೂಲವೆ |
ದುಗುಲಂ ವೀಟಿಕೆಯೆ ವೀಳೆಯಂ ಪೇಟಿಕೆ ಪೇ ||
ಳಿಗೆ ತಾರಗೆ ತಾರಕೆಯಂ |
ದುಗೆಯಂದುಕೆ ತದ್ಭವಂಗಳಿವು ಚತುರಾಸ್ಯ || ೧೩ ||

ಕದಿರೆಂಬುದು ಕಿರಣಕ್ಕಂ ಧಾ |
ನ್ಯದ ತೆನೆಗಂ ಪಿಡಿಯೆನಿಪ್ಪ ನುಡಿ ಮುಷ್ಟಿಗ್ರಾ ||
ಹ್ಯದ ಪೆಸಜಿಂ ಕರಿಣಿಯ ಪೆಸ |
ರ್ಗದನಜಿ ಕೈಪಿಡಿಯೆ ಮುಕುರವೆಲೆ ಚತುರಾಸ್ಯ || ೧೪ ||

ರನ್ನಂ ರತ್ನಂ ಜ್ಯೋತ್ಸ್ನೆಯೆ |
ಜೊನ್ನಂ ನಿಷ್ಠುರಮೆ ನಿಟ್ಟುರಂ ವಿಕ್ರಮಮೇ ||
ಪನ್ನತಿಕೆ ಕಬ್ಬಿಗಂ ಕವಿ |
ಕನ್ನವುರಂ ಕರ್ಣಪೂರವೆಲೆ ಚತುರಾಸ್ಯ || ೧೫ ||

ಕೌಂಗೆನೆ ಕ್ರಮುಕಂ ಬನ್ನಂ |
ಭಂಗಂ ಮುನ್ನೀರೆ ವಾರ್ಧಿ ಸುರಭಿಶರಂ ಕಂ ||
ಮಂಗಣೆಯಂ ಕುಡಿಯಂ ಶೂ |
ದ್ರಂ ಗುಳಿಗೆಯ ಘುಟಿಕೆಯಪ್ಪುದೆಲೆ ಚತುರಾಸ್ಯ || ೧೬ ||

ಎಲರುಣಿಯೆನೆ ಭುಜಗಂ ನೆಲ |
ಕಲನೆಂದೆನೆ ಲೋಭಿ ಕಾವನೆನೆ ಕಾಮಂ ಕಾ ||
ದಲನೆಂದೆನೆ ನಲ್ಲಂ ನಾ |
ಣಿಲಿಯೆನಲಭಿಮಾನಹೀನನೆಲೆ ಚತುರಾಸ್ಯ || ೧೭ ||



ಇಂಗದಿರನಮರ್ದುಗದಿರಂ |
ತಿಂಗಳ್ವಲ್ಯಯನಮೆಂದೆನಲ್ಪಲ್ಲಣಮಂ ||
ಮ್ಮಂಗೊಡಲಿ ಕಟ್ಟವತ್ತಿಗೆ |
ಬೆಂಗದಿರಂ ಕಮಲಮಿತ್ರನೆಲೆ ಚತುರಾಸ್ಯ || ೧೮ ||

ಕಂಬಳಮೆನೆ ಕಂಬಳಿ ದಾ |
ಳಿಂಬಮೆ ದಾಡಿಮಮಳರ್ಪೆಳರ್ಭಯಮಗ್ಗಳಂ (?) ||
ಎಂಬುದೆ ಅಧಿಕಂ ಬಂಧೂ |
ಕಂ ಬಂದುಗೆಯದಕ್ಕುಮೆಲೆ ಚತುರಾಸ್ಯ || ೧೯ ||

ದೂಸರು ತನ್ನಯ ದೆಸೆ ರವಿ |
ನೇಸಜಿ ಬೇವಸಮೆ ಚಿಂತೆ ಪೆಂಪುನ್ನತಿ ಕೂ ||
ರ್ಪಾಸಂ ಕುಪ್ಪಸಮದು ಡೊ |
ಳ್ಳಾಸಮೆ ವೈಸಿಕಮೆನಿಪ್ಪುದೆಲೆ ಚತುರಾಸ್ಯ || ೨೦ ||

ಪಡಲಿಟ್ಟುದೆನಲ್ಬಿಟ್ಟುದು |
ಕಡವರಮೆನೆ ಬೈತಿ ಗೇಣನಲ್ಸುರಗಿ ತಡಂ ||
ಬಡಮೆನೆ ತಳ್ಪಂಕಮದಾ |
ಸಡಮೆನಲಾಷಾಢಮಾಸಮೆಲೆ ಚತುರಾಸ್ಯ || ೨೧ ||

ಗಾಡಿಯೆನೆ ಸೊಬಗು ಸೋಡಂ |
ಬಾಡಮೆನಬ್ಬರಿದೆ ಜಗ್ಗೆ ನಲ್ಲುಂಕಣೆ ಕೀ ||
ಟ್ಯಾಡಿದುದೆನೆ ಪಟಿದುದು ಕೊಜಿ |
ಚಾಡಿದುದೆನಲಣಕಮಪ್ಪುದೆಲೆ ಚತುರಾಸ್ಯ || ೨೨ ||

ಅಮರ್ದೆಂದೆನಲಮೃತಂ ಪ |
ಲ್ಲಮಱಿಯೆನಲ್ಕಲಭನೆಂಟಡಿಯೆ ಶರಭಂ ಸಿಂ ||
ಗಮೆನಲ್ ಸಿಂಹಂ ಪೊಣರೆನ |
ಲಮಳೆಂದೆನಲುಭಯವಾಚಿಯೆಲೆ ಚತುರಾಸ್ಯ ‖ ೧೩ ‖

ಎಡ್ಡಮದೊಳ್ಪಿತು ಗಾಂಪನೆ |
ಹೆಡ್ಡಂ ಪರಳಿಗನೆ ಪಾಣ್ಬನರೆಯೆನಲರ್ಥಂ ||
ಅಡ್ಡಂ ದ್ವಿತ್ವಾತ್ವಕ್ಷರಮದು |
ದಡ್ಡಕ್ಕರನೆಂದು ತಿಳಿವುದೆಲೆ ಚತುರಾಸ್ಯ ‖ ೧೪ ‖

ಪಿರಿದುಂ ನಾಡೆಯಳುಂಬಂ |
ಕರಮಾದಮುಮೆನಸುಮೆಂಬಿವತ್ಯರ್ಥಂ ತೋ ||
ಡೊರೆ ದೊರೆ ತೊಣೆಯೆಣೆ ಪಾಸಟ |
ಪರಿಸಟ ಸಾಮ್ಯಾರ್ಥಮಪ್ಪುದೆಲೆ ಚತುರಾಸ್ಯ ‖ ೧೫ ‖

ಅಲ್ತೆನಲಲ್ಲೆಂಬರ್ಥಮು |
ದಲ್ತೆಂದೆನಲಲ್ಲದೆನಿಪ ತೆಱನದು ತಾಂ ಕ ||
ಣ್ಸೋಲ್ತನೆನಲೊಲ್ದ ಪಾಂಗು ಕು |
ಕಿಲ್ತುದೆನಲ್ಕೋಕಿಲಾರವಂ ಚತುರಾಸ್ಯ ‖ ೧೬ ‖

ಕಿನಿಸೆನೆ ಕಾಯ್ಪೆನೆ ಸೆಣಸೆನೆ |
ಮುನಿಸೆನೆ ಮುಳಿಸೆನೆ ಕನಲ್ಕೆಯೆನೆ ಕೋಪಂ ಮಿ ||
ಟ್ಟನೆ ಮಿಡುಕಿದನೆನಲಟಲೊ |
ಯ್ಯನೆ ಮೆಲ್ಲನೆ ಮಾಂದ್ಯನಾಮನೆಲೆ ಚತುರಾಸ್ಯ ‖ ೧೭ ‖



ತಣ್ಣಸಮೆನೆ ಶೈತ್ಯಂ ಬೆಳ |
ರ್ವಣ್ಣಮೆನಲ್ ಧವಳಕಾಂತಿ ಗೊರವನೆನಲ್ಕು |
ಕ್ಕಣ್ಣಂ ಮೆಲ್ಲಮೆನಿಪ್ಪುದು |
ಪಣ್ಣಮೆನಿಪ್ಪರ್ಥಮಪ್ಪುದೆಲೆ ಚತುರಾಸ್ಯ ‖ ೧೮ ‖

ಲಜ್ಜಣಮದು ಲಾಂಛನಮದು |
ನಜ್ಜಣಮೆನೆ ನರ್ತನಕ್ಕೆ ಪೆಸಱದು ಬಗೆಯ ||
ಲ್ಕಜ್ಜರಿಯಾಶ್ಚರ್ಯಾರ್ಥಂ |
ಚಜ್ಜರಮೆನೆ ತುರಿಪಮಪ್ಪುದೆಲೆ ಚತುರಾಸ್ಯ ‖ ೧೯ ‖

ಪಳಕನೆ ಜಳಕನೆ ಯೆನೆನಿ |
ರ್ಮಳಾರ್ಥಮಿವು ವರ್ಣಮೂಱರೊಳ್ದಿ ತ್ವಮನಂ ||
ದೊಳಕೊಂಡಿರ್ಕುಂ ದಾಹಮ |
ದಳುರೆಂಬುದು ಕನ್ನಡಕ್ಕೆ ಕವಿ ಚತುರಾಸ್ಯ ‖ ೨೦ ‖

ತಿಣ್ಣಮೆನಲ್ಭಾರಂ ಮೈ |
ಗಣ್ಣಂ ದೇವೇಂದ್ರನುರ್ಕೆನಲ್ ಗರ್ವ ಪಸು ||
ರ್ವಣ್ಣಂ ಪೊಡೆಯಲರಂ ಕಿಡಿ |
ಗಣ್ಣಂ ತ್ರ್ಯಂಬಕನೆನಿಪ್ಪುದೆಲೆ ಚತುರಾಸ್ಯ ‖ ೨೧ ‖

ಬೋಲ್ಪೋಲ್ಪಾಂಗೆನೆ ಓಲಂ |
ಬೀಲಲಿತಾಭಿಖ್ಯೆ ಸಾಮ್ಯವೆಂಬರ್ಥಂ ವೇ ||
ಗಾಯ್ಲಂ ಕಡುವೇಗಂ ಕು |
ದ್ದಾಲಂ ಗುದ್ದಲಿಯೆನಿಪ್ಪುದೆಲೆ ಚತುರಾಸ್ಯ ‖ ೨೨ ‖

ಅರಿವುಳಿಯೆನೆ ಕೆಲಬಲ್ ಮೇ |
ಣರಿಬರೆನಲ್ಕಂತೆನಿಪ್ಪ ತೆಱನದು ಕಡಲೇ ||
ಶರನಿಧಿ ಗಾವರಮೆಂದೆನೆ |
ಮೊರಹವೆನಿಪ್ಪರ್ಥಮಪ್ಪುದೆಲೆ ಚತುರಾಸ್ಯ || ೩೩ ||

ನೆಱೆ ಸಲೆ ತವೆ ಮಿಗೆ ಯೊಗುಮಿಗೆ |
ಯುಱೆಯೆಂಬಿವು ಪಾದಪೂರಣಾರ್ಥಂ ಗೆಂಟಂ ||
ದೆರದುದೆನಲ್ತಣಿದುದು ಪೊ |
ಟ್ಱಱೆ ಬಿಸಿಲೆಂದೆಂಬ ತೆಱನದೆಲೆ ಚತುರಾಸ್ಯ || ೩೪ ||

ಬಿಯದಂ ವ್ಯಾಧಂ ತೆವರಾ |
ರಯಲುದ್ದ ನೆಲಂ ಮುಸುಂಕಿತೆನಲಾವರಣಂ ||
ಜಯಮೆನೆ ಗೆಲ್ಲಂ ನೆಱೆ ಸಂ |
ದೆಯಮೆನೆ ಸಂದೇಹಮಪ್ಪುದೆಲೆ ಚತುರಾಸ್ಯ || ೩೫ ||

ಎಕ್ಕವಡಂ ಬೇಂಟೆಯ ಕೆರ |
ವೆಕ್ಕಲನೆನೆ ಕಾಡಪಂದಿ ಡೊಣೆಯೆ ನಿಷಂಗಂ ||
ಚಕ್ಕನೆ ವೇಗಾರ್ಥಂ ಸಲೆ |
ತಕ್ಕೆಂಬುದು ನೇಹಮಪ್ಪುದೆಲೆ ಚತುರಾಸ್ಯ || ೩೬ ||

ಘಟಿಲನೆ ವೇಗಂ ಸೇದೆಯೆ |
ಬಟಲ್ಕೆ ಬೆಳ್ಪಳನೆ ಬೆಳೆದುದೆಂದೆನೆ ಪಿರಿದುಂ ||
ಬೆಳೆದುದು ನಳನಳಿಕೆಯೆ ಕೋ |
ಮಳಿಕೆಯೆ ಕೋಮಲಮೆನಿಪ್ಪುದೆಲೆ ಚತುರಾಸ್ಯ || ೩೭ ||



ಪಡ್ಡಳಿಯೆಂದೆನೆ ಕಣಿಗಿಲೆ |
ಯಡ್ಡಣಮೆನೆ ಹರಿಗೆಯೊಡ್ಡೆನಲ್ ಪಾಜುವೆಸಱ್ ||
ಖಡ್ಡಮೆಲ್ಲಿದ್ಟತನಂ |
ದಡ್ಡಿಯೆ ಮಾಳಿಗೆಯೆನಿಪ್ಪುದೆಲೆ ಚತುರಾಸ್ಯ || ೩೮ ||

ಗೋಟಾಯ್ಲನೆ ರಾವುತನೋ |
ದಾಳಿಯೆ ಪಾಠಕನೊಡರ್ಚಿತೇ ಗೆಯ್ದುದು ಮೇಣ್ ||
ಲೋಲಮೆ ನಡುಕಂ ಮೆಱೆವ |
ಟ್ಟಾಳಮೆಯಟ್ಟಳಿಯೆನಿಪ್ಪುದೆಲೆ ಚತುರಾಸ್ಯ || ೩೯ ||

ಪಸರಂ ಪ್ರಸರಮೆನಿಕ್ಕುಂ |
ಪಸದನಮೆಂದೆನೆ ಪ್ರಸಾಧನಂ ಕೊಡಲಿಯೆ ತಾ ||
ನೆಸೆವುದು ಕುಠಾರನಾಮಮು |
ದುಸಿರ್ಬೆಂಚಿಯೆ ಸರಸಿಯೆಂದು ಕವಿಚತುರಾಸ್ಯ || ೪೦ ||

ಕಿಸುವೆನೆ ಕೆಂಪುಂ ತಾಮ್ರಮು |
ಮೆಸಕಂ ಮೇಣೆಸೆವುದೆಯ್ದೆ ಸಂಭ್ರಮಮೇ ಮಾ ||
ಮುಸಕಂ ನೂತನಮೆಂದಱೆ |
ಪೊಸತಂ ಬಗ್ಗೆಂದು ಭಾಗ್ಯಮೆಲೆ ಚತುರಾಸ್ಯ || ೪೧ ||

ರಿಸಿ ಋಷಿ ಬಸವಂ ವೃಷಭಂ |
ಕೊಸಗೆಂದೆನೆ ಬೆಟ್ಟದಾವರೆಗೆ ನಾಮಂ ಸಂ ||
ತಸಮೆನೆ ಸಂತೋಷಾಖ್ಯಮು |
ದೆಸೆವಳೆಕಮಲೇಖಮಪ್ಪುದೆಲೆ ಚತುರಾಸ್ಯ || ೪೨ ||

ಚಾಗಿಯೆ ತಾಂ ತ್ಯಾಗಿ ವಲಂ |
ಜೋಗಿಯೆನಲ್ ಯೋಗಿ ಮಾಗೆಯೆನೆ ಮಾಖಾಖ್ಯಂ ||
ಜಾಗವೆ ಯಾಗಂ ಘೂಕಂ |
ಗೂಗೆವೆಸರ್ಕಪಿಲೆ ಕವಿಲೆಯೆಲೆ ಚತುರಾಸ್ಯ || ೪೩ ||

ಪದಪೆಂದೆನೆ ಸಂರಂಭಂ |
ಹದಿಬದೆಯೆ ಪತಿವ್ರತಾಭಿಧಾನಮುನಾಳ್ಗಂ ||
ಸೊದೆ ಸುಧೆ ವೇದಂ ಬೇದಂ |
ಚದುರೆನೆ ಚಾತುರ್ಯಮಪ್ಪುದೆಲೆ ಚತುರಾಸ್ಯ || ೪೪ ||

ನಱುವೆನೆ ನೌಸವಮೆನೆ ಕಂ |
ಪಱಿಲೆಂದೆನೆ ಕೆಸಱು ಸಗ್ಗದೊಱಿ ಬಾನ್ದೊಱೆಯೆಂ ||
ದಱಿ ಸುರನದಿಯಂ ನೆಱೆಯಱಿ |
ತಱಿಸಂದುದು ನಿಶ್ಚಯಾರ್ಥಮೆಲೆ ಚತುರಾಸ್ಯ || ೪೫ ||

ಪಱಿಯೆನೆ ವಸ್ತ್ರವಿಶೇಷಂ |
ಪಱಿವೆಂದೆನೆ ನಿಂದೆ ಪೊಡೆಯೆನಲ್ ಜಠರಂ ಪುಸಿ ||
ಗಳಪುವುದುಂ ಪೊಱಮಟ್ಟುದು |
ತಳರ್ದುದು ಕೆಳರ್ದುದು ವಿವಾದವೆಲೆ ಚತುರಾಸ್ಯ || ೪೬ ||

ಕಣೆ ಸರಲಂಬುವೆಸರ್ಬಿ |
ಜ್ಜಣಿಗೆಯೆ ಬೀಸಣಿಗೆ ಬಿಂಕಮೆನೆ ಗರ್ವಂ ಬ ||
ದ್ದಣಮೆನಲೊಸೆಗೆಯ ಪಱಿ ಗೊಂ |
ದಣಮೆನೆ ನಿಕರಕ್ಕೆ ನಾಮಮೆಲೆ ಚತುರಾಸ್ಯ || ೪೭ ||



ಸಿರಿಕಂಡಂ ಶ್ರೀಖಂಡಂ |
ಶಿರೀಷಮದು ಸಿರಿಸಮುಧಟು ಕಡುಪುಂ ದರ್ಪಂ ||
ಪಿರಿದಿಂದಿರನಿಂದ್ರಂ ಚಂ |
ದಿರನೆನೆ ಚಂದ್ರಂಗೆ ನಾಮಮೆಲೆ ಚತುರಾಸ್ಯ || ೪೮ ||

ಪರ್ವಿದುದೆನೆ ಕುಡಿವರಿದುದು |
ಗುರ್ವುಮುಗುರ್ವೆನೆ ಭಯಾನಕಂ ತಾನಕ್ಕುಂ ||
ಜರ್ವನೆ ಜಂಕಣೆ ವಿಪ್ರನೆ |
ಪಾರ್ವಂ ಗುಣ್ಪೆನೆ ಗಭೀರಮೆಲೆ ಚತುರಾಸ್ಯ || ೪೯ ||

ಮುಟ್ಟವೆಯೆನೆ ಮಾಣಿಕವೆನೆ |
ಮುಟ್ಟಿನೆ ಪೊಲೆ ಸೂತಕಾಭಿಧಾನಂ ಗದ್ದುಗೆ ||
ಪಟ್ಟವಣೆ ನರೇಂದ್ರಾಸನ |
ವೊಟ್ಟಜಮೆನಲತಿಶಯಾರ್ಥಮೆಲೆ ಚತುರಾಸ್ಯ || ೫೦ ||

ಐಯಂಬಂ ಪಂಚಶರಂ |
ರೈಯಂ ರಮ್ಯಂ ಪರಾಕ್ರಮಂ ಪ್ರಥಿತಂ ಬ ||
ಲ್ಗೈಯಂ ತಾರಕಮಥನಂ |
ಮುಯ್ಯಿಮೊರ್ಗನೆಸಿಸಿಕೊಂಬನೆಲೆ ಚತುರಾಸ್ಯ || ೫೧ ||

ಪಚ್ಚವೆ ತೊಡವಾಭರಣಂ |
ಮುಚ್ಚೆಯೆ ತಾಂ ಮೂರ್ಛೆ ಮಚ್ಚರಂದೆನೆ (?) ಶೂನ್ಯಂ ||
ಬಚ್ಚೆಯೆನಲ್ಕೆಟ್ಟುದು ಮೇಣ್ |
ಮಚ್ಚರಮೆನೆ ಮತ್ಸರಾರ್ಥಮೆಲೆ ಚತುರಾಸ್ಯ || ೫೨ ||

ಕಂಕಣಮಾಕೋಂಟಿ ಬಿಲಂ |
ಸಂಕೆಯುದೇಂ ಗೋಣಿ ಸಬಳವಂಕಣಮೆಂಬೀ ||
ಬಿಂಕದ ಶಬ್ದಂ ಸಂಸ್ಕೃತ |
ಕಂ ಕನ್ನಡಕಂ ಸಮಾನಮೆಲೆ ಚತುರಾಸ್ಯ || ೫೩ ||

ಗಲ್ಲಂ ಮಲ್ಲಂ ತೋರಣ |
ಮಲ್ಲಣಿಯುಮಂಕಪಟ್ಟವೆಯೆಂಬಿವು ಸಂಸ್ಕೃತ (?) ||
ದಲ್ಲಿಯುಮೀಕರ್ಣಾಟಕ |
ದಲ್ಲಿಯುಮೊಂದೇ ಸಮಾನಮೆಲೆ ಚತುರಾಸ್ಯ || ೫೪ ||

ಅರರೇ ಬಾಪುರೆ ಮಝು ಫೂ |
ತುರೆ ಭಲರೇ ಲೇಸು ಜಾಗು ಮಾಧಣು ಧಿರುರೇ ||
ಪುರೆಯೆನೆ ಕೊಂಡಾಟಮುದ |
ಚ್ಚರಿ ಹೋಹೋ ಎಂಬ ಪದಮುದೆಲೆ ಚತುರಾಸ್ಯ || ೫೫ ||

ಕೀಟಿಪ್ಪೊಡೆಯೆನೆ ಕೀಟಿಪ್ಪೊಟ್ಟಿಗೆ |
ಸೀಟಿಪ್ಪೆನೆ ನಿಡಿದಿಂಗೆ ಸೈಪೆಸಲ್ತಾಂ ನೇರ್ಪಿಂಗೆ ||
ಕಾಟ್ಪುರವೆನೆ ಕಾಲ್ಗೆ ಪೆಸರ್ಜ |
ಶಾಳ್ಪೆನಲಳ್ಪಿಂಗೆ ನಾಮಮೆಲೆ ಚತುರಾಸ್ಯ || ೫೬ ||

ಅಮುಳ್ದಲೆವಕ್ಕಿಯೆ ಭೇರುಂ |
ಡಮುದಪ್ಪುದು ಬಮರಮೆಂಬ ಶಬ್ದಂ ಸಲ್ಗುಂ ||
ಭ್ರಮರಕ್ಕೆ ರಸುಮೆ ರಶ್ಮಿಯೆ |
ಸಮನೆನಿಪುದು ಹಬೆಯೆ ಪ್ರಭೆಯೊಳೆಲೆ ಚತುರಾಸ್ಯ || ೫೭ ||



ಹೂರಂ ಪೂರಮೆನಿಕ್ಕುಂ |
ಪಾರಾವತಮುದುವೆ ಪಾರಿವಂ ಪೇಟ್ದೊಡೆ ಶ್ರುಂ ||
ಗಾರಮೆ ಸಿಂಗರಮೆಸೆವಂ |
ಗಾರಮೆಯಂಗರಮೆನಿಪ್ಪುದೆಲೆ ಚತುರಾಸ್ಯ || ೫೮ ||

ಅಂಗಾರಸ್ಫೋಟಿಕೆಯೆನ |
ಲಂಗಾರವೋಳಿಗೆ ಕಳಲ್ದುದದೆ ಕಳಿದುದು ಮೇ ||
ಣಂಗಣಮೆನಲಂಗಳಮುದು |
ರಿಂಗಣಮೆನೆ ಕುಣಿಹಮಪ್ಪುದೆಲೆ ಚತುರಾಸ್ಯ || ೫೯ ||

ಜವಹುರಮೆನೆ ಯಮಪುರವಡ |
ಪವಳಂ ಪಡಪಾಳಿ ಬಾನಲೆನೆ ಮುಸುಳಿದುದುಂ ||
ರವಮುಲಿಯೈಸಿರಿಯೈಶ್ವ |
ರ್ಯವದರಸಂ ರಾಜನಮಳಮೇಣೆ ಚತುರಾಸ್ಯ || ೬೦ ||

ಕೂಸೆಂದೆನೆ ಪೆಸಱದು ಕೊಡ |
ಗೂಸಿಂಗೆ ಕೊಳಂಚಿ ಕೊಳಚೆ ಪುಣ್ಯಮೆ ಹೂನ್ಯಂ ||
ಗೋಸಣೆ ಘೋಷಣೆಯೆನಿಕುಂ |
ಬಾಸಣಿಯೆನೆ ಮುಸುಕಿದರ್ಥಮೆಲೆ ಚತುರಾಸ್ಯ || ೬೧ ||

ದೂಸಿಗವಸರಮೆನಿಪ್ಪುದ |
ದೇ ಸೀರೆಯು ಪಸರವಚ್ಚಮೆನೆ ವಿಮಲಾರ್ಥಂ ||
ಪಾಸೆನೆ ಹಾಸಂ ಪೆಸರಡಿ |
ಯೇ ಸೊನ್ನೆಯೆ ಚಿನ್ನಮಪ್ಪುದೆಲೆ ಚತುರಾಸ್ಯ || ೬೨ ||

ವಕುಳಮೆ ಬಕುಳಂ ಸುಖಮೇ |
ಸೊಕನೊಸೆಗೆಯೆ ಕೀರ್ತಿ ಮದ್ದಳಿಗನೇ ಮಾರ್ದಂ ||
ಗಿಕನಕ್ಕುಂ ಸತ್ತಿಗೆ ಛ |
ತ್ರಿಕೆಯೆಂಬುದು ಬಗೆಯೆ ಚಿತ್ತಮೆಲೆ ಚತುರಾಸ್ಯ || ೬೩ ||

ಅಸುಗೆಯಶೋಕಂ ವಿಷಮೇ |
ಬಿಸಮುಜ್ಜುಗಮೆಂಬ ಪೆಸಱದುದ್ಯೋಗಂ ತೇ ||
ರಸಿಯೆ ತ್ರಯೋದಶಿಯಲ್ಪದ |
ಪೆಸಱಣುವುಬ್ಬೆಗಮೆ ತಾಪಮೆಲೆ ಚತುರಾಸ್ಯ || ೬೪ ||

ಪಟು ಬಿಂಜಮರಣ್ಯಂ ಕೊಳು |
ಗುಳಮಾಹವಮಳ್ಕಿಯಕ್ಕೆ ಮೇಣುಗ್ಗಡಮು ||
ಗ್ಗಳಮಧಿಕಂ ಬರ್ದಿಲಮೆನಲ್ |
ನಿಳಿಂಪನಿಲಯಕ್ಕೆ ನಾಮಮೆಲೆ ಚತುರಾಸ್ಯ || ೬೫ ||

ಕನ್ನಡಿಗೋಡೆಯ ಪೆಸಱದು |
ಕನ್ನವಡಂ ಪರಮೆ ಬಂಡುಣಿಯೆ ಭೃಂಗಾಖ್ಯಂ ||
ತಾನ್ನೆಲನೆನೆ ರಾಜ್ಯಂ ಬಾ |
ವನ್ನಮೆನಲ್ ಮಲಯಜಾತಮೆಲೆ ಚತುರಾಸ್ಯ || ೬೬ ||

ಪಂಚಮಪೂರ್ವಂ ಬಂಚನೆ |
ವಂಚನೆಯಿಂಚರಮೆ ಮಧುರನಿನದಂ ಕೂಸಾ ||
ಟಂ ಚಿಣ್ಣರಾಟಮದು ಹಸ |
ನಂ ಚೆಲ್ಲಂ ನಿಂದೆ ಚುನ್ನಮೆಲೆ ಚತುರಾಸ್ಯ || ೬೭ ||



ಅಂತಹನಿಂತಹನೆಂತಹ |
ನಿಂತೀನುಡಿಯೆನ್ನನಿನ್ನನೆನ್ನನೆನಿಕ್ಕುಂ ||
ಮಂತ್ರಣಮೆನಲೇಕಾಂತಂ |
ಸಂತಸಮೆನೆ ಹರ್ಷಮಪ್ಪುದೆಲೆ ಚತುರಾಸ್ಯ || ೬೮ ||

ಸೂಜಿಯೆ ಸೂಚಿಯೆನಿಕ್ಕುಂ |
ಸಾಜಮೆ ತಾಂ ಸಹಜಮಂಚೆ ಹಂಸೆಗೆ ಪೆಸಱದು ||
ಗಾಜೆನೆ ಕಾಚಂ ತದ್ಭವ |
ದೋಜೆಯೆ ದೇಶೀಯಕಾದುದೆಲೆ ಚತುರಾಸ್ಯ || ೬೯ ||

ಇಟ್ಟೆಯೆ ಬಿಟ್ಟೇರು ದಟಿಂ |
ಥಟ್ಟು ಬಸಂತಮೆ ವಸಂತನಾಮಮುದಕ್ಕುಂ ||
ಗುಟ್ಟೆಯೆನಲ್ಪುಟಿಕೆ ವಲಂ |
ನೆಟ್ಟನೆನಲೃಜುತೆಯಪ್ಪುದೆಲೆ ಚತುರಾಸ್ಯ || ೭೦ ||

ಕೆಂಕಂ ಪೊಂಬಣ್ಣಂ ವಸು |
ರುಂ ಕಱಿದು ತವೊೖಳ್ಕೈಕ್ಯವರ್ಣಂ (?) ಪೆರ್ದೊಱೆ ||
ಯುಂ ಕೆರೆಯುಂ ಕೊಳನುಂ ಮು |
ತ್ತುಂ ಕೆಂಬರಲೊಗೆವ ತಾಣಮೆಲೆ ಚತುರಾಸ್ಯ || ೭೧ ||

ನಳಿತೋಳ್ನೀರ್ಮುಡಿ ಸೆಳ್ಳುಗು |
ರೆಳಲತೆಯಿಮ್ಮಾವು ಕೋಗಿಲೆಯಂದಿಂ ||
ತಳವಡಲುಪಸರ್ಗಾಖ್ಯಂ |
ಬಳೆ ಕಾಚುಂ ಗಾಜು ದೇಶಿಯೆಲೆ ಚತುರಾಸ್ಯ || ೭೨ ||

ಬಾಳಮೆ ಲಾವಂಚಂ ಕರ ।
ವಾಳಮೆ ಕರವಾಳ್ ಪ್ರವಾಳಮೆ ಪವಳಂ ತುಟಿ ॥
ಲಾಳಿನೆ ಬಲ್ಬಂಟಂ ವಾ ।
ಕಾಳಿ ಮಹಾಕಾಳಿ ನಿಸದಮಿದು ಚತುರಾಸ್ಯ ॥ ೭೩ ॥

ಪೊಡವಿಯೆನೆ ಧಾತ್ರಿ ತುಟಿಲೆನೆ ।
ಪೊಡಮುಡಿಕೆ ವಲಂ ವಿಶೇಷವಿಸ್ಪಷ್ಟಾರ್ಥಂ ॥
ಕುಡುವೆನೆ ಕೊಂಕುಂ ಬಟಿಕಾ ।
ಗಡೆಯೆನಲಾಗಳೆಯೆನಿಪ್ಪುದೆಲೆ ಚತುರಾಸ್ಯ ॥ ೭೪ ॥

ಎಕ್ಕೆಕ್ಕೆ ತೇನತೇನಮಿ ।
ವಕ್ಕುಂ ಮೇಲ್ಮೇಲೆನಿಪ್ಪುದಳ್ಕಜು ನೇಹಂ ॥
ತಕ್ಕಂ ಕೆಳೆಯಂ ಸುಸಿಲೆಂ ।
ದಕ್ಕುಂ ಸುರತಕ್ಕೆ ನಾಮಮೆಲೆ ಚತುರಾಸ್ಯ ॥ ೭೫ ॥

ಬಾರಿಪುದೆನೆ ವಾರಿಪುದದು ।
ಪೇರಣಿಲೆನೆ ಸೊಂದಿಗೊಡಗಂ ತವಿಲಿಡರೆನೆ ॥
ದಾರಿದ್ರ್ಯಂ ಸಪುರಂ ಕಿಟಿ ।
ದೋರಂತಿರಲೊಂದೆ ತೆಜನದೆಲೆ ಚತುರಾಸ್ಯ ॥ ೭೬ ॥

ತೊವೆ ತೋವೆಯಂಬಿಲಂ ಕಟಿ ।
ತೊವರಿಯೆ ತಾಂ ತೊಗರಿ ಕಪಿಲವರ್ಣಮೆನಿಕ್ಕುಂ ॥
ಕವಿಲ್ವಣ್ಣಂ ಜೋಡುವೆಸಱ್ ।
ಸವಗಂ ಕರ್ಚಿದುದೆ ತೊಳೆದುದೆಲೆ ಚತುರಾಸ್ಯ ॥ ೭೭ ॥



ಪಾಱುಂಬಳೆ ಚಕ್ರಂ ಪೊಱ ।
ವಾಱನೆ ಜಘನಂ ಪೊದಟ್ಟುದೆನೆ ಪೊಣ್ಮಿದುದ ॥
ಕ್ಕಾಱಡಿ ಪರಮೆಗ [ಳೆನಲೆಲ] ।
ರೇಱ್ ಬಹಿತ್ರಕಮೆ ಬೈತ್ರಮೆಲೆ ಚತುರಾಸ್ಯ ॥ ೭೮ ॥

ಹೆಟ್ಟುಗೆಯೆಂದೆನೆ ಕಾಮಿನಿ ।
ಹುಟ್ಟುಗೆಯೆನೆ ಸೀರೆ ಸೋಗಿಲೆಂದೆನೆ ಮಡಿಲೆಱ ॥
ವೆಟ್ಟೆಂಬುದು ಪಟ್ಟವೆಸ ।
ವಿರ್ಣಟ್ಟೆಂಬುದು ಮಿಣ್ಣೆಯಪ್ಪುದೆಲೆ ಚತುರಾಸ್ಯ ॥ ೭೯ ॥

ಪೆರ್ಮೆಯನೆ ಹೆಮ್ಮೆ ನೋಟಿಪ್ಪೊಡೆ ।
ಕೂರ್ಮೆಯೆ ನೇಹಂ ಸಮಂತು ಕಾಣೆಯೆ ಬಲ್ಲಾಳ್ ॥
ಒರ್ಮೆಯೆನಲೊಮ್ಮೆ ಮೆಯ್ಯ ನ ।
ವಿರ್ಮಿಡಿತೆನಲ್ಕೆ ಪುಳಕಮೆಲೆ ಚತುರಾಸ್ಯ ॥ ೮೦ ॥

ಮುಂಮೊನೆಗೈದುವೆನಲ್ ತಿಸು ।
ಳಂ ಮಟ್ಟಮೆ ಪದುಳಮಂತೆ ಕೆಮ್ಮನೆ ಸುಮ್ಮನೆ ॥
ಬಿಮ್ಮನೆ ಗಮ್ಮನೆ ವಹಿಲಂ ।
ದಿಮ್ಮಿದುದೆನೆ ಬಿಣ್ಪು ಬಗೆವೊಡೆಲೆ ಚತುರಾಸ್ಯ ॥ ೮೧ ॥

ನಿಗರಮೆನಲುಂನತಂ ಬ ।
ಟ್ಟಗೈದುವೆನೆ ಚಕ್ರಮೆಗ್ಗ ನೆನೆ ಗಾವಿಲನು ॥
ಜ್ಜುಗಮೆನಲುದ್ಯೋಗಂ ಗಾ ।
ದಿಗೆಯೆನಲಗಳೆಂಬ ತೆಜನದೆಲೆ ಚತುರಾಸ್ಯ ॥ ೮೨ ॥

ಮಂಜರಿ ತೊಡಂಬೆ ಭಾವಿಪೊ |
ಡಂಜನಮೆನೆ ಬೈಕೆಗಪ್ಪು ಕಣಸೆನೆ ಮೃಗಪೋ ||
ತಂ ಜಸಮೆನೆ ಯಶಮದು ಯೇ
ಱಂಜೌವನೆ ಯುವತಿಯಪ್ಪಳೆಲೆ ಚತುರಾಸ್ಯ ‖ ೮೩ ‖

ಅರಮೆಎನಲ್ಕದು ಕಿಱುಡು |
ಳ್ಪರಲ್ದ್ದೆನಲೊಳಗುಬೀಗಿ ಬಿಱಿದುದು ಬಿಜ್ಜೋ ||
ದರಿಯರೆ ವಿದ್ಯಾಧರಿಯರ್ |
ದುರುಳರೆನಲ್ಧೂರ್ತರೆಂಬರೆಲೆ ಚತುರಾಸ್ಯ ‖ ೮೪ ‖

ಪಾಱ್ಮನೆಯಾಳ್ವಂ ತುಡುಗುಣಿ |
ನಲ್ಮೆಯೆ ಶುಭಮೊಳ್ಪು ಲೇಸು ನೀರಂ ನೀರ್ಕಾ ||
ದಲ್ಮೆಯೆ ನೇಹಂ ನೇಸ |
ಗರ್ಲ್ಮಾರ್ತಾಂಡೋಪಲಾಖ್ಯಮೆಲೆ ಚತುರಾಸ್ಯ ‖ ೮೫ ‖

ಉಡಿನೂಲ್ಕಟಿಸೂತ್ರಂ ಕೌ |
ಳುಡೆಯೆನೆ ಮೂಢಾವಿಯೋಜನಾಚಾರ್ಯಂ ಕಂ ||
ನಡವಕ್ಕಿ ಗಿಳಿ ನಿಧಾನಂ |
ಕಡವರಮಾಗಸಮೆ ಅಂಬರಂ ಚತುರಾಸ್ಯ ‖ ೮೬ ‖

ಪಳುಕೆನೆ ಸ್ಫಟಿಕಂ ತಾಂ ಪಡ |
ವಳನೆನೆ ಪಡಿಯರನಮರ್ಕೆಯೆನಲಳವಟ್ಟುದು ಮೇಣ್ ||
ಮಿಳಿರೆಂದು ಚಂಚಲತೆಯ |
ವ್ವಳಿಸಿತೆ ಮೇಲ್ವಾಯ್ದುದೆನಿಪುದೆಲೆ ಚತುರಾಸ್ಯ ‖ ೮೭ ‖



ಮೂಮೆಯೆನಲ್ಮೂಱಿಂ ಸೋಬ್ |
ಮೈಮೆಯೆನಲ್ಕಹಿಮೆ ನಿದನವೆಂದು ನಿಧಾನಂ ||
ಕೈಮೆಯೆನೆ ಮಾಟಮೈಕಿಲೆ |
ಹೈಮಂತಂ ಮಂಜುಗಾಲಮೆಲೆ ಚತುರಾಸ್ಯ ‖ ೮೮ ‖

ಅಱ್ ನೀಂ ಲಿಂಗತ್ರಯದೊಳ್ |
ಪೆಱತು ಪೆಱಂ ಪೆಱಳೆನಿಪ್ಪುದನ್ಯಾರ್ಥಂ ಮು ||
ಕ್ಕುಱಕಿದುದೆನೆ ಮುತ್ತಿದುದಿಡಿ |
ಕಿಱಿದುದೆನಲ್ತೀವಿದರ್ಥಮೆಲೆ ಚತುರಾಸ್ಯ ‖ ೮೯ ‖

ಬಿರಯಿಯೆನೆ ವಿರಹಿ ಚೌವಟಿ |
ಮೊರಡೆನೆ (?) ನಾಲ್ವಟ್ಟಿಯೆಕ್ಕಸರ ಮೇಕಾವಳಿ ||
ಗರಗರಿಕೆ ಚೊಕ್ಕಟಂ ಸೀ |
ವರಮೆಂದು ತುಷಾರಮಪ್ಪುದೆಲೆ ಚತುರಾಸ್ಯ ‖ ೯೦ ‖

ಬೇಗುದಿಯೆನೆ ಸಂತಾಪಂ |
ಸೀಗುರಿಸಿತೆನಲ್ಕೆ ವಿಭ್ರಮಾರ್ಧ ಮದಕ್ಕುಂ ||
ಕೇಗಿದುದೆನೆ ಕೇಕಾರುತಿ |
ಸೋಗೆಯೆನಲ್ ಗಂಡುನವಿಲುಮೆಲೆ ಚತುರಾಸ್ಯ ‖ ೯೧ ‖

ಕುತ್ತುಱನೆ ಹೊದಱು ಬಗೆವೊಡೆ |
ಕುತ್ತೆಸಳೆನೆ ಕಿಱುವೆಸಳ್ಪೊದಟ್ಟುದು ಪೊಱಪೊ ||
ಣ್ಮತ್ತನಿಕುಂ ತಹಿಯಂತದು (?) |
ಜತ್ತು ನೆಗಟ್ತೆಯೆ ಪ್ರಸಿದ್ಧಮೆಲೆ ಚತುರಾಸ್ಯ ‖ ೯೨ ‖

ಸ್ಫಟಿ ಪೆಡೆ ಜಟಿ ಜಡೆ ತಟ ತಡಿ |
ತಟಂ ದಡಂ ಚೂಡ ಜೂಟ ನೋಡಲಡವಿಯೇ ||
ಆಟವಿಯೆ ಬಹುರೂಪಿಣಿ ಕೊ |
ಲ್ಲಟಗಿತ್ತಿಯೆ ಲಾಟ ಲಾಳಿ ಕವಿ ಚತುರಾಸ್ಯ || ೯೩ ||

ಕಿಳಿರೆನೆ ಹಯನಿನದಂ ಹಂ |
ಗುಳಿಯೆನೆ ಕಾಲ್ಮಣೆಯೊಬಿಲ್ದುದೆನಲೊಲ್ದುದು ಕಾ ||
ತಳಿಗನೆನಲ್ಕಾತುರಮಂ |
ತಳೆದಂ ಮಾನುಷನೆ ಮಾನಿಸಂ ಚತುರಾಸ್ಯ || ೯೪ ||

ಕಾವಣಮೆಂದೆನೆ ಪಂದರ್ |
ಗಾವರಮೆನಲಬ್ಬರಂ ಪುಗಿಲ್ಪುಗಿಲೆನಿಪಾ ||
ರಾವಂ ಕೋಕಿಲನಿನದಂ |
ಡಾವರಮೆನೆ ಡಾಮರಾಖ್ಯಮೆಲೆ ಚತುರಾಸ್ಯ || ೯೫ ||

ಚವರಂ ಚಾಮರಮಂತದು |
ಡವಕೆಯೆ ಕಾಳಂಜಿ ಪಾಮರನೆ ಗರ್ವಂ ನೌ ||
ಸವಮಾವೋದಂ ಬಿಸವಂ |
ದವೆಂಬ ನುಡಿ ವಿಸ್ಮಯಾರ್ಥಮೆಲೆ ಚತುರಾಸ್ಯ || ೯೬ ||

ಸಿಗ್ಗವಮೆನೆ ಗಜದಂತಂ |
ಹಗ್ಗಿಯೆನಲ್ಕಗ್ನಿ ಯುಗಮೆ ಜುಗಮೆಂದೆನಿಕುಂ ||
ಮೊಗ್ಗೆನೆ ವಶವೆಂದೆನಿಕುಂ |
ಸಗ್ಗಮೆನಲ್ನಾಕಲೋಕಮೆಲೆ ಚತುರಾಸ್ಯ || ೯೭ ||



ತಳವೆಳಗೆನೆ ನಿಬ್ಬರಮಿ |
ರ್ಕುಳಿಗೊಂಡುದೆನಲ್ಕೆ ಸೆಳೆದುಕೊಂಡರ್ಥಮದೆ ||
ವುಳಿನಲ್ಕೆಂಜಲವುಬುಗಾ |
ಗುಳಮುದರೋಚಿಕೆಯೆನಿಪ್ಪುದೆಲೆ ಚತುರಾಸ್ಯ || ೯೮ ||

ಬೆಕ್ಕಸಮೆನಲಾಶ್ಚರ್ಯಂ |
ಸಕ್ಕದಮೆನೆ ಸಂಸ್ಕೃತಂ ಸವಣ್ಮನೆ ಬಸದಿಯೆ ||
ನಿಕ್ಕುಂ ಕೊಟ್ಟಜ ಕಪ್ಪಮೆ |
ನಿಕ್ಕುಂ ತಾನಚ್ಚಿಯಕ್ಷಿಯೆಲೆ ಚತುರಾಸ್ಯ || ೯೯ ||

ನಲ್ಲೆಂದೊಳ್ಳಿತು ವಾಕ್ಯಮೆ |
ಸೊಲ್ಲದು ರಿಗ್ಗವಣೆಯೆ ಮೃದಂಗಂ ಮೆಲ್ಪೆನೆ ||
ಮೆಲ್ಲಿತು ಪೂವಡಿಗಂ ತಾಂ |
ಪುಲ್ಲವಡಿಗನೆಂದು ತಿಳಿವುದೆಲೆ ಚತುರಾಸ್ಯ || ೧೦೦ ||

ಕತ್ತರಿ ಕರ್ತರಿ ಜಂಗುಳಿ |
ಮೊತ್ತಂ ದಂಪಿಣಿಯೆ ಜೋಡೆ ಕುಸ್ತುಂಬರಿಯೇ ||
ಕೊತ್ತುಂಬರಿ ಕಬ್ಬವೆಸ |
ರ್ಚತ್ತಾಣವೆನಿಪ್ಪುದಮಲಕವಿ ಚತುರಾಸ್ಯ || ೧೦೧ ||

ಶೇಂಗುಹಮುಂದೆನೆ ಪಕ್ಕಿಯೆ |
ಬಿಂಗುಹಮುಕ್ಕಟಯೆನಿಪ್ಪುದಾಶ್ಚರ್ಯಪದಂ ||
ಪಾಂಗೆನೆ ಭಂಗಿಯೆನಲ್ ಸಾ |
ಮ್ಯಂ ಗೊಂದಣ ಸರಸ ಮೊಗ್ಗು ಕವಿಚತುರಾಸ್ಯ || ೧೦೨ ||

ಮತ್ತರೆನಲ್ಕಲಸಿದರೆ ಪವ |
ಣ್ಪೆತ್ತುದೆನಲ್ಭಾವಿಸಿದುದೆನಿಪ್ಪಾಯಮೇ ತ ||
ನತ್ತಿನೆ ತನ್ನದು ಬಿನ್ನಣಿ |
ಬಿತ್ತಿಗನೆಂದೆನಿಪನಮಳಕವಿಚತುರಾಸ್ಯ || ೧೦೩ ||

ಕೊವರಂ ಬಾಂಬಂ ಕುಂಬರ |
ನವಗಡಿಸಿತವಗ್ರಹಾರ್ಥಮೆಳೆದಳಿರ್ವೆಸಱಿದು ||
ತೊವರೆನೆ ಮುಯ್ಪೆನೆ ಮುಡುಹು |
ಗ್ಗುವೆಸರ್ಬಿಕ್ಕಿಂಗೆ ( ? ) ನಾಮಮೆಲೆ ಚತುರಾಸ್ಯ || ೧೦೪ ||

ಕೊವೆಯೆನೆ ಮುಂಬತಿ ಕೂರ್ಪಿವು |
ತವರ ಕ್ಷಾಮಣಿಯೆ ರಕ್ಕವಣಿ ತೀವ್ರಂ ತಿ ||
ಬ್ಬವಪ್ಪುದದು ಸಬ್ಬಂ ಹಾ |
ಸ್ಯವೆನಿಪ್ಪುದು ದಿಟವಿದ್ಯೈಸೆ ಕವಿಚತುರಾಸ್ಯ || ೧೦೫ ||

ತಿಱಿದುದೆನಲ್ತಾಂ ಕೊಯ್ದುದು |
ಕುಱುಂಪೆನಲ್ಕುಱುಹು ಗೋಪಕಾಮಿನಿಯ ಪೆಸಱ್ ||
ತುಱುಗಾರ್ತಿ ಕಣ್ಮಲರ್ದುದ |
ನೞ್ ಕಣ್ಬೇಟೆಂದು ಸರಸಕವಿಚತುರಾಸ್ಯ || ೧೦೬ ||

ಕಿಸುಗಣ್ಚಿದನೆಂದೆನೆ ಕೋ |
ಪಿಸಿ ನೋಡಿದನೆಂಬ ಪಾಂಗು ಧೈರ್ಯಕ್ಕತ್ವಂ ದೀ ||
ವಸವೆಂದೆನಿಕುಂ ( ? ) ದಿನದೂ |
ನಿಸಿದರ್ಥಂ ( ? ) ಭೀತಿಕಾರನೆಲೆ ಚತುರಾಸ್ಯ || ೧೦೭ ||



ವ್ಯಸನಂ ಬೆಸನಮೆನಿಕ್ಕುಂ |
ಪಸಾಯಿತು ಪಡವಳಂ ಪ್ರತೀಹಾರಕನೆನೆ ||
ಪೆಸಱದು ಕಟ್ಟಿಗೆ ಕಾಱಗೆ |
ಕಿಸುರ್ವೇರೆನೆ ಮರುಹೆಯೌಷಧಂ ಚತುರಾಸ್ಯ || ೧೦೮ ||

ತಾಣಾಂತರಮೆಂದೆನಲದು |
ಠಾಣಯವೆ ಕಜೋೞಯಿ ಚಪ್ಪೆಯಂ ( ? ) ಪೆಱಗೆನೆ ಪಿಂ |
ತಾಣೆಯದಾಜ್ಞೆಯೆ ಗಾನಮೆ |
ಗಾಣಂ ಸೈಪೆಂದು ಪುಣ್ಯಮೆಲೆ ಚತುರಾಸ್ಯ || ೧೦೯ ||

ಬಿಸುಗಲ್ಲೆನೆ ರವಿಕಾಂತಂ |
ಪಸುರ್ವರಲೆನೆ ಪಚ್ಚೆ ಚಂದಗಲ್ಕುಳಿರ್ಗಲ್ಲಿನ ||
ಲೊಸರ್ಗಲ್ಕರ್ಬೊನ್ನಲ್ಲಿಂ |
ದು ಸೂಜಗಲ್ಲತ್ಯಮಿಂತಿದೆಲೆ ಚತುರಾಸ್ಯ || ೧೧೦ ||

ಮುಗಿಲ್ಗಲ್ಲಾಲಿವರಲ್ಕಾ |
ರ್ಮುಗಿಲ್ಗಿಚ್ಚು ಸಿಡಿಲ್ಮುಗಿಲ್ಪೆಳಗು ಮಿಂಚದು ಸೋ ||
ನೆಗೆ ನಾಮಂ ತಂದಲ್ ಪಟು |
ವಗಿಚ್ಚು ಕಾಟ್ಕಿಚ್ಚಿ ನಿಪ್ಪುದೆಲೆ ಚತುರಾಸ್ಯ || ೧೧೧ ||

ಕಡಲುರಿ ಮುನ್ನೀರ್ಗಿಚ್ಚೆನೆ |
ವಡಬಾನಲನಿಂಗಳಂ ದಲೆನೆ ಕೆಂಡಂ ಕಿ ||
ಳ್ತಡವೆನೆ ಕಿಸುರಕ್ಕರಮುಂ |
ನುಡಿ ಸುದ್ದಗೆಯೆಂದು ಸರಸಕವಿಚತುರಾಸ್ಯ || ೧೧೨ ||

ಕುಳಿರ್ವೆಟ್ಟಣುಗಿಯೆನಲ್ಕುಮೆ |
ತಿಳಿಯಿಂಗಡಲಣುಗಿ ರಮೆಯೆನಿಕ್ಕುಂ ನಿಜದಿಂ ||
ಬಳರಿ ಮಹಾಕಾಳಿಯದಂ |
ತಿಳಿ ಬಾಚಿಸಿತೆಂದು ಸರಸಕವಿಚತುರಾಸ್ಯ || ೧೧೩ ||

ಪಸುರ್ವುಲ್ಪೆ ಳೆದೆಡೆಯಂತದು |
ಪಸಲೆವೆಸರ್ಬ ಸುಗ್ಗಿಯನೆ ಬಸಂತಮದಱನೆಂ ||
ದುಸಿರ್ದೊಡೆ ಧರ್ಮಂ ಸಸಿಮಣಿ |
ಯೊಸರ್ಗಲ್ ಪಿಂಜರಿಯೆ ಬೆಳ್ಪಿಯೆಲೆ ಚತುರಾಸ್ಯ || ೧೧೪ ||

ಆರ್ದಲೆಯಂ ಮೂಯಿರ್ಮೊ |
ಗಂ ತಾಂ ಸೋದುದು ಹಮ್ಮದಂ ಬೋ ||
ದುದು ಮೂರ್ಖೋದಯಮದೊರೆಯೆ |
ನಲ್ಸಾಮ್ಯನಾಮಮೆನಿಪ್ಪರ್ಥಮೆಲೆ ಚತುರಾಸ್ಯ || ೧೧೫ ||

ಕೇದಗೆಯೆಂದೆನೆ ಕೇತಕಿ |
ಜಾದಗೆಯೆನೆ ಚಾತಕಕ್ಕೆ ಪೆಸರ್ಸಂಪಗೆಗಿಂ ||
ತಾದುದು ಚಂಪಕನಾಮಂ |
ಜಾಧಿಯೆ ತಾಂ ಜಾತಿಯಪ್ಪುದೆಲೆ ಚತುರಾಸ್ಯ || ೧೧೬ ||

ವಿಮಲಂ ವೈಮಲ್ಯಂ ತರ |
ತಮಮೆಂಬುದು ತಾರತಮ್ಯಮುಚ್ಚುಕಮೌತ್ಸು ||
ಕ್ಯಮುದಕ್ಕುಂ ರಮಣಾರ್ಥಂ |
ರಮಣೀಯ್ಯಕ ರಾಮಣೀಯಮೆಲೆ ಚತುರಾಸ್ಯ || ೧೧೭ ||



ಲಾಕಮೆ ಲಾಕುಳಮಂತದು |
ಕಾಕಮೆನಲ್ ಕಾಗೆ ವಾಟಮೆನೆ ಬಾಡಗಮದು ||
ಕೋಕಮೆ ಪೊಣರ್ವಕ್ಕಿವೆಸರ್ಙ |
ಟೀಕೆನೆ ಟಪ್ಪಣಮೆನಿಪ್ಪುದೆಲೆ ಚತುರಾಸ್ಯ || ೧೧೮ ||

ಕುಸಲಂ ಕೌಶಲ್ಯಂ ಪರ |
ವಸಮೆಂಬುದು ಪಾರವಶ್ಯಮೆಂದೆನಿಪರ್ಥಂ ||
ಪಿಸುಣಮೆನಲ್ಪೈಶೂನ್ಯಂ |
ವಿಸಸನಮೆನೆ ವೈಶಸನಮದೆಲೆ ಚತುರಾಸ್ಯ || ೧೧೯ ||

ವಿಷಮಂ ವೈಷಮ್ಯಂ ಮಾ |
ಹಿಷಮೆನೆ ಮಹಿಷಾಭಿಧಾನಮೆಂದಾದುದು ವಿ ||
ದ್ವಿಷನೆನೆ ವಿದ್ವಿಷನಕ್ಕುಂ |
ವಿಷಯಂ ವೈಷಯಮೆನಿಪ್ಪುದೆಲೆ ಚತುರಾಸ್ಯ || ೧೨೦ ||

ಪಟ್ಟವಣೆ ಸಿಂಹಪೀಠಂ |
ಪಟ್ಟಳಿಯೆನಲ್ಕೆ ದುಗುಲಮದಳವ್ಯಕ್ತಿಯೆ ||
ನೆಟ್ಟನೆ ದೂದವಿಯೆಂದೆನೆ |
ಕುಟ್ಟನಿ ಬಜ್ಜರಮೆ ವಜ್ರಮೆಲೆ ಚತುರಾಸ್ಯ || ೧೨೧ ||

ಸೋರ್ಮುಡಿ ಚಂದಳಿರೆಳಲತೆ |
ಕಾರ್ಮುಗಿಲೊಳ್ಪಾತು ನೀಟ್ಟ ಕಣ್ಮಲರಿಂಗದಿ ||
ರಿರ್ಮುಡಿ ನುಣ್ದೊಡೆ ಬಡನಡು |
ಪೆರ್ನೊಲೆಯುಪಸರ್ಗಮೆನಿಪುದೆಲೆ ಚತುರಾಸ್ಯ || ೧೨೨ ||

ದೂದವಿಯೆಂದೆನೆ ಕುಂಟಣಿ ।
ಯಾದಂ ತಾನಿಚ್ಚೆಗಾರ್ತಿ ರತಿಯೆಳನೀಲ ॥
ಕ್ಕಾದುದು ರಾಜಾವರ್ತಂ ।
ಜೋದರ್ಗಜಜೀವರಪ್ಪರೆಲೆ ಚತುರಾಸ್ಯ ॥ ೧೨೩ ॥

ಸೈಪೆನೆ ಪುಣ್ಯಮದಕ್ಕುಂ ।
ಕೈಪಿಡಿಯೆನೆ ದರ್ಪಣಕ್ಕೆ ನಾಮಮದಕ್ಕುಂ ॥
ಓಪಳೆನಲ್ಪ್ರಾಣೇಶ್ವರಿ ।
ಕೈಪೆಯನಲ್ಕಹಿಗೆ ನಾಮಮೆಲೆ ಚತುರಾಸ್ಯ ॥ ೧೨೪ ॥

ವಿಸಸನಮೆಂದೆನೆ ಕದನಂ ।
ಕಸವರಮೆನೆ ದ್ರವ್ಯ ಬಿಲಲುಮೆಂದೆನೆ ಮಾರುಂ ( ? ) ॥
ಬೆಸನಮೆನೆ ವ್ಯಸನಮೆಂಬುದು ।
ಸುಸಿಲೆನೆ ಸುರತಕ್ಕೆ ನಾಮಮೆಲೆ ಚತುರಾಸ್ಯ ॥ ೧೨೫ ॥

ದಿಮ್ಮಿದರೆನಲ್ಕೆ ದೊಡ್ಡಿತು ।
ಬೊಮ್ಮನೆನಲ್ ಬ್ರಹ್ಮ ಕಾವನೆಂದೆನೆ ಕಾಮಂ ॥
ಕಮ್ಮನೆನಲ್ಕದು ಪರಿಮಳ ।
ಕೆಮ್ಮನೆನಲ್ಸುಮ್ಮನಿರ್ಪುದೆಲೆ ಚತುರಾಸ್ಯ ॥ ೧೨೬ ॥

ಇನಿವಿಲ್ಲಂ ಸಿರಿಗಂದಂ ।
ನನೆಗಣೆಯಂ ಕಾಮನೆಂಬ ನಾಮಮದಕ್ಕುಂ ॥
ಇನಿಯಳೆನಲ್ವಲ್ಲಭೆ ತಾಂ ।
ಕನಲಿದುದೆನೆ ಕೋಪಗೊಂಡುದೆಲೆ ಚತುರಾಸ್ಯ ॥ ೧೨೭ ॥



ಬಂಡುಣಿ ಷಟ್ಚರಣಂ ಸರಿ ।
ಮಿಂಡಿಯೆನಲ್ಪ್ರಾಯದಿಂದೆ ಸೊರ್ಕುವಬಲೆಯು ॥
ಭಂಡಣಮೆನೆ ಸಂಗ್ರಾಮಂ ।
ಕೊಂಡುದೆನಲ್ ಧರಿಸಿದರ್ಥಮೆಲೆ ಚತುರಾಸ್ಯ ॥ ೧೨೮ ॥

ನುಡಿವಕ್ಕಿಯೆನಲ್ ಗಿಣಿಯುಂ ।
ಪಡಿಯರವಕ್ಕಿಯೆನೆ ಕೋಗಿಲೆಯ ಪೆಸಱಕ್ಕುಂ ॥
ನಡೆವಕ್ಕಿ ಹಂಸೆಯಕ್ಕುಂ ।
ತೊಡರ್ವಕ್ಕಿಯೆ ಚಕ್ರವಾಕಮೆಲೆ ಚತುರಾಸ್ಯ ॥ ೧೨೯ ॥

ಮಱುವಕ್ಕಮೆನಲ್ಮಱುವಡೆ ।
ಗಱುವೂವೆನೆ ಕೇತಕೀಸನಾಮಮದಕ್ಕುಂ ॥
ಜಱುಚೆನೆ ಕಾಳ್ಗಿಡವಂ ನೇ ।
ಸೞನಲ್ದಿನನಾಥನಪ್ಪನೆಲೆ ಚತುರಾಸ್ಯ ॥ ೧೩೦ ॥

ತಂದಲೆನಲ್ಕದು ಸೋನೆಯು ।
ಗುಂದಲೆನಲ್ಬಹಳವೆಗ್ಗನೆಂದೆನೆ ಗಾಂಪಂ ॥
ಚಂದನೆನಲ್ಚಂದ್ರಂ ಕುಡಿ ।
ಯಂದನೆನಲ್ ಶೂದ್ರನಪ್ಪನೆಲೆ ಚತುರಾಸ್ಯ ॥ ೧೩೧ ॥

ಅಱನೆಂದನೆ ಧರ್ಮಂ ಬಾಂ ।
ದೊಱೆಯೆನೆ ಸುರಸಿಂಧು ಪಲ್ಲಮಱಿಯೆನೆ ಕಲಭಂ ॥
ಕುಱುವೆಂದೆನೆ ಮಲ್ಲಿಗೆನ ।
ಲ್ಕಱಿಯೆಂದೆನೆ ಕರ್ಪನಿಪ್ಪುದೆಲೆ ಚತುರಾಸ್ಯ ॥ ೧೩೨ ॥

ಇಂತೀ ಕನ್ನಡದೇಸಿಯ |
ನಂತಾರ್ಥವ ಬುಧಸಮೂಹವಱಿವಡೆವಂದದೆ ||
ಸಂತಸದಿನಱಿಪಿದಂ ಕವಿ |
ಚಿಂತಾಮಣಿಯೆನಿಪ ಸರಸಕವಿ ತಿಪ್ಪರಸಂ || ೧೩೩ ||

ವಾಣಿಗೆ ಜಾಣೆಗೆ ನೆಱೆಕ |
ಲ್ಯಾಣಿಗೆ ಮೋಕ್ಷಾಗ್ರಕಡಱಿಲುಜ್ಜುಗಿಸಿದ ನಿ |
ಶ್ರೇಣಿಗೆ ಸರೋಜಪಾಣಿಗೆ |
ಮಾಣದೆ ನಾನೆಱಗೆ ವರದೆಯಪ್ಪಳವೋಘಂ || ೧೩೪ ||

ಪಗಲೊಂದಕೊಂದು ಕಬ್ಬವು |
ನೆಗಟಿಲ್ ಚಾತುರ್ಯವಿರ್ದೊಡಂ ಕಣ್ಣಿಲ್ಲದೆ ||
ಜಗಮಂ ತೊಳಲುವೆನೆಂಬೀ |
ಮುಗುದನ ಮಾತೆಂತುಟೆಂತು ತಪ್ಪದವೋಘಂ || ೧೩೫ ||

ಸಂಧಿವಿಭಕ್ತಿಸಮಾಸಗ |
ಳಂದಮುನವಱಿಡೆಯೊಳೆಯ್ದು ತುಱುಗಿದ ತತ್ಪದ ||
ಬಂಧಮುನಱಿಯದೆ ಪೇೞ್ವಂ |
ಮಂದಿಯ ಕಂಡೂಟ್ವಿ ನಾಯೆ ನಿಷ್ಕಾರಣದೊಳ್ || ೧೩೬ ||

ಪರಿವಿಡಿದೀಕರ್ಣಾಟಕ |
ಸರಸಕವೀಂದ್ರರ್ಕಳೊಳ್ಳಿತಾದುದೆನಲ್ ಬಿ ||
ತ್ತರಿಸಿದನೊಲವಿಂ ಕವಿಬೊ |
ಮ್ಮರಸಂ ವಾಕ್ಶ್ರೀನಿಧಾನಮುಖತಾಮರಸಂ || ೧೩೭ ||

—: ಸಂಪೂರ್ಣ :—

# ಚತುರಾಸ್ಯ ನಿಘಂಟು

## (ದೇಸಿ, ತತ್ಸಮ-ತದ್ಭವ ಶಬ್ದಗಳು)

ಅರ್ಥವಿವರಣೆ

# ಅರ್ಥವಿವರಣೆ

ಪದ್ಯ ಸಂಖ್ಯೆ

೧ ಶ್ರೀಮದ್ಗಿರಿಜಾಜಾತ : ಶ್ರೀಮತ್ಪಾರ್ವತಿಯ ಮಗ (ಗಣಪತಿ)
ಆನನ ತಾಮರಸ : ಮುಖ ಕಮಲ
ಸಮಧುರ ಪ್ರಮೋದ : ಸವಿಯಾದ ಆನಂದ
ದೇವೋದ್ದಾಮ : ದೇವತೆಗಳಲ್ಲಿ ಉತ್ತಮನಾದವ
ಮನಮೋದ : ಮನಕ್ಕೆ ಆನಂದ ಕೊಡುವ
ಪಂಪೆಯಾಳ್ದನು : ಹಂಪೆಯನ್ನಾಳುವವನು
ಅನವರತ : ಸರ್ವದಾ

೨ ಇಂತೆಂದು ನಮಿಸಿ : ಹೀಗೆಂದು ವಂದಿಸಿ
ವಿದ್ವಜ್ಜನರ : ವಿದ್ವಾಂಸರ
ಚಿಂತೆ ಪರಿಹರಿಪ ಮಾಳ್ಕೆಯೊಳ್ : ಚಿಂತೆ ಪರಿಹಾರವಾಗುವಂತೆ
ದೇಸಿ ತದ್ಭವಂ ತತ್ಸಮಂ : ದೇಶೀಯ ಹಾಗು ತದ್ಭವ-ತತ್ಸಮ ಶಬ್ದಗಳನ್ನು
ಇಂತುಸಿರ್ವೆ : ಹೀಗೆ ಹೇಳುವೆನು

೩ ಕವಿ ಚತುರಾನನ : ಕವಿಯಾದ ಚತುರಾನನನು
ಬಿವರದಿಂ : ವಿವರವಾಗಿ
ಚೆಲ್ವಾಗೆ : ಚಂದವಾಗಿ
ರಚಿಸಿದೆಂ : ರಚಿಸಿದೆನು

೪ ನೆಲದಮರ್ದುಣಿ : ಭೂಸುರ ( ಬ್ರಾಹ್ಮಣ )
ಗಗನಾನ್ವಯತಿಲಕ : ಗಗನ ವಂಶದ ಶ್ರೇಷ್ಠ
ಪಂಪರಸ ಸೂನು ತಿಪ್ಪರಸ : ಪಂಪರಸನ ಮಗ ತಿಪ್ಪರಸ
ಚತುರಾನನಮೆನಲಾಂ : ಚತುರಾನನನೆಂಬ ನಾನು

ಘಳಿಲನೆ : ತೀವ್ರವಾಗಿ
ಕರ್ನಾಟಕಾಭಿಧಾನ : ಕರ್ನಾಟಕವೆಂಬ ಹೆಸರು
ಉಸಿರ್ದಂ : ಹೇಳಿದನು

೫ ಪೊಂಬಸಿರಂ:(ಹಿರಣ್ಯಗರ್ಭ), ನುಡಿವೆಣ್ಣಾಣ್ಮ : (ಸರಸ್ವತಿಯ ಪತಿ), ಬೇದ ಬಿಜ್ಜಗ : (ವೇದ ವಿದ್ಯೆ ಬಲ್ಲವ) ಬಿದಿ : (ವಿಧಿ), ನಾಲ್ಮೊಗ: ( ನಾಲ್ಕು ಮುಖವುಳ್ಳವ ), ಅಜ : ( ಹುಟ್ಟದೆ ಇದ್ದವ. )
—ಇವು ಬೊಮ್ಮ-ಬ್ರಹ್ಮನಿಗೆ ಹೆಸರು

೬ ಪೆರೆದಲೆಯ : ( ತಲೆಯಲ್ಲಿ ಚಂದ್ರನುಳ್ಳವ ), ಕರಿಗೊರಲ : ( ಕಪ್ಪು ಕೊರಳಿನವ ), ತ್ರಿಸುಳಿ ( ತ್ರಿಶೂಲಿ ), ಐಮೊಗ : ( ಐದು ಮುಖದವ ), ಬಾಂದೊಱೆದಲೆಯ : (ತಲೆಯಲ್ಲಿ ಗಂಗೆಯುಳ್ಳವ ), ಪಣೆಗಣ್ಣಂ : ( ಹಣೆಯಲ್ಲಿ ಕಣ್ಣುಳ್ಳವ ),
—ಇವು ಮಹಾದೇವನ ಹೆಸರುಗಳು.

೭ ರಕ್ಕಸವಗೆ : (ಅಸುರಾರಿ), ಮುನ್ನೀರ್ವಕ್ಕೆಗ : ( ಸಮುದ್ರವು ವಾಸ ಸ್ಥಳವಾಗಿದ್ದವ), ಇಂಗಡಲ ಕುವರಿಯೆಱೆಯ : (ಸಮುದ್ರದ ಮಗಳ ಒಡೆಯ ), ನಿರ್ರೂವೊರ್ಕುಳ : ( ನಾಭಿಯಲ್ಲಿ ಕಮಲವುಳ್ಳವ ), ಅಲರ್ಗಣ್ಣ : ( ಹೂವಿನಂತೆ ಕಣ್ಣುಳ್ಳವ ), ಕಾರೊಡಲ : ( ಕರಿಯ ದೇಹವುಳ್ಳವ ), —ಇವು ವಿಷ್ಣುವಿನ ಹೆಸರುಗಳು.

೮ ಆರಾಮು ( ತ್ಸ ) ಆರವ ( ವಿಶ್ರಾಂತಿ )
ಹಾರ ( ತ್ಸ ) ಆರ ( ಹೂವಿನ ಸರ )
ಕುಮಾರ ( ತ್ಸ ) ಕುವರ ( ಮಗ )
ಕಸ್ತೂರಿ ( ತ್ಸ ) ಕತ್ತೂರಿ
ಕರ್ಪೂರ ( ತ್ಸ ) ಕಪ್ಪುರ

೯ ಪೊಂಪ : ಸಮ ಭಾಗ ( ಸರಿಯಾದ ಪಾಲು )
ಜೊಂಪ : ತೊಂಬೆ ( ಕಾಂತಿ )
ಮರವೆ : ಮತ್ತತ್ವ ( ಮದ )



ಪೊಂಪುಳಿ : ಪುಳಕ ( ರೋಮಾಂಚ )
ಆಲಂಪು : ವಿಭವ ( ಐಶ್ವರ್ಯ )

೧೦ ಕುಳಿರ್ವೆಟ್ಟು : ಕೀಲ್ವೆಟ್ಟು ( ತಂಪಾದ ಬೆಟ್ಟ )
ಚಳಿವೆಟ್ಟು : ಹಿಮಾದ್ರಿ ( ಹಿಮಾಲಯ )
ಎಲರ್ : ಪವನ ( ವಾಯು )
ಬಾಂಬೊಳೆ : ಮಂದಾಕಿನಿ ( ಆಕಾಶಗಂಗೆ )
ತಣ್ಪುಳಿಲು : ಸೈಕತ ( ತಂಪಾದ ಮಳಲ ರಾಶಿ )

೧೧ ನಿಸದ, ಸಿಕ್ಕುವ : ( ಸತ್ಯ ) ( ಖರೇತನ )
ಸಾಹಸ ( ತ್ಸ ) ಸಾಸ ( ಪ್ರಯತ್ನ )
ಕೈಗಳಿದುದು : ದಸ ಕಳಿದುದು ( ಕೈಮೀರಿದ್ದು )

೧೨ ಜತ್ತುಕ : ಕೈತವ ( ವಂಚನೆ, ಮೋಸ )
ಎರ್ದೆವತ್ತಿದುದು : ಚಿತ್ತದಲ್ಲಿ ನೆಲೆಗೊಂಡದ್ದು (ಮದನದಲ್ಲಿನಟ್ಟದ್ದು)
ವಿಸ್ತಾರ ( ತ್ಸ ) ಬಿತ್ತರ ( ವಿಶಾಲ )
ಉತ್ತರೀಯಕ ( ತ್ಸ ) ಉತ್ತರೀಯ ( ಸೆಲ್ಲೆ )

೧೩ ಯಮುನೆ ( ತ್ಸ ) ಜಗುನೆ ( ಯಮುನಾನದಿ )
ದುಕೂಲ ( ತ್ಸ ) ದುಗುಲ ( ನಯವಾದ ಬಟ್ಟೆ )
ವೀಟಕೆ ( ತ್ಸ ) ವೀಳೆಯ ( ತಾಂಬೂಲ )
ಪೇಟಕೆ ( ತ್ಸ ) ಪೇಳಿಗೆ ( ಪೆಟ್ಟಿಗೆ )
ತಾರಕೆ ( ತ್ಸ ) ತಾರಗೆ ( ನಕ್ಷತ್ರ )

೧೪ ಕದಿರ್ : ಕಿರಣ, ಧಾನ್ಯದ ತೆನೆ (ಪ್ರಕಾಶ, ಕಾಳಿನ ಗೊಂಚಲ )
ಪಿಡಿ, ಮುಷ್ಟಿಗ್ರಾಹ್ಯ-ಕರಿಣೀ ( ಹಿಡಿಯುವದು )
ಕೈಪಿಡಿ : ಮುಕುರ ( ಕನ್ನಡಿ )

೧೫ ರತ್ನ ( ತ್ಸ ) ರನ್ನ ( ಮಣಿ, ಹರಳು-ಕಲ್ಲು )
ಜ್ಯೋತ್ಸ್ನೆ ( ತ್ಸ ) ಜೊನ್ನ ( ಬೆಳದಿಂಗಳು )
ನಿಷ್ಠುರ ( ತ್ಸ ) ನಿಟ್ಟುರ ( ಕಠೋರ )
ವಿಕ್ರಮ : ಪನ್ನತಿಗೆ ( ಶೂರತನ )

ಕವಿ ( ತ್ಸ ) ಕಬ್ಬಿಗ ( ಕವಿತ್ವ ರಚಿಸುವವ )
ಕರ್ಣಪೂರಂ ( ತ್ಸ ) ಕನ್ನವುರ ( ಕರ್ಣಕುಂಡಲ )

೧೬ ಕ್ರಮುಕ [ ತ್ಸ ] ಕೌಂಗು [ ಅಡಿಕೆ ]
ಭಂಗ [ ತ್ಸ ] ಬನ್ನ [ ದುಃಖ ]
ಮುನ್ನೀರು : ವಾರ್ಧಿ [ ವಾರಿನಿಧಿ. ಸಮುದ್ರ ]
ಸುರಭಿಶರಂ : ಕಮ್ಮಂಗಣೆಯಂ [ ಕಾಮ ]
ಕುಡಿಯ : ಶೂದ್ರ [ ಚತುರ್ಥ ವರ್ಣದವ ]:
ಘಟಿಕೆ [ ತ್ಸ ] ಗುಳಿಗೆ [ ಮಾತ್ರೆ ]

೧೭ ಎಲರುಣಿ : ಭುಜಗ [ ಸರ್ಪ ]
ನೆಲಕಲನು : ಲೋಭಿ [ ಜೀನ ]
ಕಾಮ [ ತ್ಸ ] ಕಾವ [ ಮನ್ಮಥ ]
ಕಾದಲನು : ನಲ್ಲ [ ಪತಿ ]
ನಾಣಿಲಿಯ : ಅಭಿಮಾನಹೀನ [ ಮಾನಗೇಡಿ ]

೧೮ ಇಂಗದಿರ್, ಅಮರ್ದುಗದಿರ್ : ತಿಂಗಳ್ [ ಚಂದ್ರ ]
ಪಲ್ಲಮನಂ : ಪಲ್ಲಣಂ [ ಕುದುರೆಯ ಜೀನು ]
ಅಮಂಗೊಡಲಿ : ಕಟ್ಟವತ್ತಿಗೆ [ ಒತ್ತಿಹಿಡಿ ]
ಬೆಂಗದಿರಂ : ಕಮಲಮಿತ್ರ [ ಬಿಸಿಯಾದ ಕಿರಣಗಳುಳ್ಳ, ಕಮಲದ ಗೆಳೆಯ, ಸೂರ್ಯ.

೧೯ ಕಂಬಳಂ [ ತ್ಸ ] ಕಂಬಳಿ [ ಗೊಂಗಡಿ ]
ದಾಡಿಮ [ ತ್ಸ ] ದಾಳಿಂಬ [ ದಾಳಿಂಬರ ]
ಅಳರ್, ಪೆಳರ್ : ಭಯ [ ಅಂಜಿಕೆ ]
ಅಗ್ಗಳಂ : ಅಧಿಕ [ ಹೆಚ್ಚು ]
ಬಂಧೂಕ [ ತ್ಸ ] ಬಂದುಗೆ [ ಕೆಂಪು ದಾಸವಾಳ ಹೂ ]

೨೦ ದೂಸರು : ದೆಸೆ [ ನಿಮಿತ್ತ ]
ರವಿ : ನೇಸರು [ ಸೂರ್ಯ ]
ಬೇವಸಂ : ಚಿಂತೆ [ ದುಃಖ ]



ಪೆಂಪು : ಉನ್ನತಿ [ ಏಳ್ಗೆ ]
ಕೂರ್ಪಾಸ [ ತ್ಸ ] ಕುಪ್ಪಸ [ ಕುಬಸ ]
ಡೊಳ್ಳಾಸಂ : ವೈಸಿಕಂ [ ವಂಚನೆ ]

೨೧ ಪಡಲಿಟ್ಟುದು : ಬಿದ್ದುದು [ ಬಿದ್ದದ್ದು ]
ಕಡವರ : ಬೈತಿ [ ಬಯಕೆ ]
ಗೇಣ : ಸುರಗಿ [ ಕತ್ತಿ ]
ತಡಂಬಡಂ : ತಳ್ಳಂಕಂ [ ಚಿಂತೆ ]
ಆಷಾಢ [ ತ್ಸ ] ಆಸಡಮಾಸ [ ಆಷಾಢ ತಿಂಗಳು ]

೨೨ ಗಾಡಿ : ಸೊಬಗು [ ಸೌಂದರ್ಯ ]
ಸೋಡಂಬಾಡಂ : ಬರಿದೆ [ ಸುಮ್ಮನೆ ]
ಜಗ್ಗ : ಝುಂಕಣಿ [ ಬೆದರಿಕೆ ]
ಕೀಟ್ಬೊಡಿದುದು : ಪಟಿದುದು [ ನಿಂದಿಸುವದು ]
ಕೊರಚಾಡಿದುದು : ಅಣಕ [ ಚೇಷ್ಟೆ ]

೨೩ ಅಮೃತಂ [ ತ್ಸ ] ಅಮರ್ದ [ ಅಮರರ ಪಾನೀಯ ]
ಪಲ್ಲಮರಿ : ಕಲಭ [ ಆನೆಯ ಮರಿ ]
ಎಂಟಡಿಯ : ಶರಭಂ [ ಎಂಟುಕಾಲಿನ ಮೃಗ ]
ಸಿಂಹ [ ತ್ಸ ] ಸಿಂಗ
ಪೊಣರ್ : ಅಮಳ [ ಜೊತೆಗೂಡಿ ಹುಟ್ಟು ]

೨೪ ಎಡ್ಡ : ಒಳ್ಳಿತು [ ಒಳ್ಳೆಯದು ]
ಗಾಂಪ : ಹೆಡ್ಡ [ ಕಗ್ಗ, ಹುಂಬ ]
ಪರಳಿಗ : ಪಾಣ್ಬ [ ಜಾರ, ವ್ಯಭಿಚಾರಿ ]
ಅರೆ, ಅರ್ಧ : ಅಡ್ಡ [ ಅರ್ಧಭಾಗ ]
ದ್ವಿತ್ವಾಕ್ಷರಂ [ ತ್ಸ ] ದಡ್ಡಕ್ಕರಂ [ ಒತ್ತಕ್ಷರ ]

೨೫ ಪಿರಿದುಂ ನಾಡೆಯೊಳುಂಬಂ : ಕರಮಾದಂ [ ಕೂಳಬಾಕ ]
[ಕೋಡು : ಒರೆ [ ಸಾಮ್ಯ ]

ದೊರೆ : ತೊಣೆ [ ಸರಿಸಮಾನ ]
ಪಾಸಟಿ : ಪರಿಸಟಿ [ ಸಮ ]

೨೬ ಅಲ್ತೆ : ಅಲ್ಲ
ಕಜ್ಜೋಲ್ತನು : ಪಾಂಗು [ ಸೌಂದರ್ಯದಿಂದ ಮೈಮರೆತವನು ]
ಕುಕುಲ್ತುದು : ಕೋಕಿಲಾರವ [ ಕೋಗಿಲೆಯ ಸ್ವರ ]

೨೭ ಕಿನಿಸು : ಕಾಯ್ಪು [ ಸಿಟ್ಟು ]
ಸೆಣಸು, ಮುನಿಸು, ಮುಳಿಸು, ಕನಲ್ಕು [ ಕೋಪ ]
ಮಿಟ್ಟನೆ ಮಿಡುಕಿದನು : ಅವಿಲು [ ಚಿಂತೆ ]
ಒಯ್ಯನೆ : ಮೆಲ್ಲನೆ [ ಸಾವಕಾಶ ]

೨೮ ತಣ್ಣಸ : ಶೈತ್ಯ [ ತಂಪು ]
ಬೆಳರ್ವಣ್ಣಂ : ಧವಳ ಕಾಂತಿ [ ಬಿಳಿಯ ಬಣ್ಣ ]
ಗೊರವ : ಮುಕ್ಕಣ್ಣ [ ಶಿವ ]
ಮೆಲ್ಲಂ : ಪಣ್ಣಂ [ ಮೃದುವಾದದ್ದು ]

೨೯ ಲಾಂಛನ [ ತ್ಸ ] ಲಜ್ಜಣ [ ಚಿಹ್ನ ]
ನರ್ತನ [ ತ್ಸ ] ನಚ್ಚಣ [ ಕುಣಿತ ]
ಆಶ್ಚರ್ಯ [ ತ್ಸ ] ಅಚ್ಚರಿ [ ಸೋಜಿಗ ]
ಬಜ್ಜರಂ : ತುರಿಪಂ [ ತ್ವರೆ ]

೩೦ ಪಳಕ : ಜಳಕ [ ನಿರ್ಮಲ ]
ದಾಹ : ದಳುರಿ [ ಬೇಗೆ ]

೩೧ ತಿಣ್ಣ ; ಭಾರ [ ಒಜ್ಜೆ ]
ಮೈಗಣ್ಣಂ : ದೇವೇಂದ್ರ [ ಮೈತುಂಬ ಕಣ್ಣುಳ್ಳವ, ಇಂದ್ರ ]
ಉರ್ಕೆ : ಗರ್ವ [ ಸೊಕ್ಕು ]
ಪಸುರ್ವಣಂ, ಪೊಡೆಯಲರಂ [ ಹಸಿರು ಬಣ್ಣದವನೂ ಹೊಟ್ಟೆ
ಯಲ್ಲಿ ಹೂವುಳ್ಳವನೂ ಆದ ವಿಷ್ಣು ]
ಕಿಡಿಗಣ್ಣಂ : ತ್ರ್ಯಂಬಕ [ ಉರಿಗಣ್ಣನವ, ಶಿವ ]

೩೨ ಬೋಲ್ಪೋಲ್ಪಾಂಗ : ಓಲೆಂಬ ಈ ಲಲಿತಾಭಿಖ್ಯ [ ಸಾಮ್ಯ ]



ವೇಗಾಯ್ಲಂ : ಕಡುವೇಗಂ
ಕುದ್ದಾಲ [ ತ್ಸ ] ಗುದ್ದಲಿ

೩೩ ಅರೆವುಳಿ : ಅರೆಬರೆ [ ಅರ್ಧಮರ್ಧ ]
ಕಡಲು : ಶರನಿಧಿ [ ಸಮುದ್ರ ]
ಗಾವರ : ಮೊರಹವ [ ಸದ್ದು, ಸಪ್ಪಳ ]

೩೪ ನೆರೆ, ಸಲೆ, ತವೆ, ಮಿಗೆ, ಒಗುಮಿಗೆ [ ಬಹಳ ]
ಗೆಂಟಿಂದೆರೆದುದು : ತಣಿದುದು [ ಸಂತುಷ್ಟಿ ]
ಪೊಳ್ತಿರೆ : ಬಿಸಿಲು

೩೫ ವ್ಯಾಧ [ ತ್ಸ ] ಬಿಮದ [ ಬೇಡ, ಬೇಟೆಯಾಡುವವ ]
ತೆವರ್ : ಅರೆಯಲುದ್ದನೆಲ [ ಎತ್ತರ ಸ್ಥಳ ]
ಮುಸುಂಕಿತು : ಆವರಣ [ ಹೊದಿಕೆ ]
ಜಯಂ : ಗೆಲ್ಲಂ [ ಗೆಲ್ಲುವದು ]
ಸಂದೇಹಂ [ ತ್ಸ ] ಸಂದೆಯಂ [ ಸಂಶಯ ]

೩೬ ಎಕ್ಕವಡಂ : ಬೇಂಟೆಯ ಕೆರವು [ ಬೇಟೆಗೆ ಹೋಗುವಾಗ
ಮೆಟ್ಟುವ ಕೆರವು ]
ಎಕ್ಕಲನು : ಕಾಡಪಂದಿ [ ಅಡವಿಯ ಹಂದಿ, [ ಮಿಕ ]
ದೊಣೆ : ನಿಷಂಗ [ ಬತ್ತಳಿಕೆ, ಬಾಣಗಳ ಮನೆ ]
ಜಕ್ಕನೆ : ವೇಗ [ ತ್ವರೆ ]
ತಕ್ಕೆ : ನೇಹಂ [ ಸ್ನೇಹ ]

೩೭ ಥಳಿಲನೆ : ವೇಗಂ [ ಅವಸರ ]
ಸೇದೆ : ಬಟಲ್ಕೆ [ ಬಳಲಿಕೆ ]
ಬೆಳ್ಪಳ, ಬೆಳೆದುದು : ಪಿರಿದುಂ ಬೆಳೆದುದು [ ಹೆಚ್ಚು ಬೆಳೆದದ್ದು,
ಬೆಳವಣಿಗಾದು ]
ನಳನಳಿಕೆ, ಕೋಮಳಿಕೆ ; ಕೋಮಲ [ ಎಳೆಯ ]

೩೮ ಪಡ್ಡಳಿ : ಕಣಿಗಿಲೆ [ ಕಣಗಿಲ ಗಿಡ ]
ಅಡ್ಡಣ : ಹರಿಗೆ [ ಢಾಲು ]

ಒಡ್ಡು : ಪಾಜು [ ಎದುರಾಗು ]
ಖಡ್ಡ : ದಿಟ್ಟತನ [ ಧೈರ್ಯ ]
ದಡ್ಡಿ : ಮಾಳಿಗೆ [ ಮನೆಯ ಮೇಲ್ಭಾಗ ]

೩೯ ಗೋಪಾಯ್ಲ : ರಾವುತ [ ಕುದುರೆಯ ಸವಾರ ]
ಓದಾಳಿ : ಪಾಠಕ [ ಓದುವವ, ಅಭ್ಯಾಸ ಮಾಡುವವ ]
ಒಡರ್ಚಿತು : ಗೆಯ್ದುದು [ ಮಾಡಿದುದು ]
ಲೋಲಂ : ನಡುಕಂ [ ನಡುಗುವದು ]
ಅಟ್ಟಾಳಂ : ಅಟ್ಟಳ [ ಅರಮನೆ ]

೪೦ ಪ್ರಸರಂ : [ ತ್ಸ ] ಪಸರಂ [ ಹಚ್ಚಿದ ಅಂಗಡಿ ]
ಪ್ರಸಾಧನ [ ತ್ಸ ] ಪ್ರಸದನ [ ಅಲಂಕಾರ ]
ಕುಠಾರ [ ತ್ಸ ] ಕೊಡಲಿ [ ಕೊಡ್ಲಿ ]
ಬೆಂಚೆ : ಸರಸಿ [ ಹೊಂಡ, ಕೆರೆ ]

೪೧ ಕಿಸು, ಕೆಂಪು : ತಾಮ್ರಂ [ ಕೆಂಪು ಬಣ್ಣ ]
ಎಸಕಂ : ಎಸೆವುದು [ ಶೋಭಿಸುವದು ]
ಸಂಭ್ರಮ : ಮಾಮಸಕ [ ಉತ್ಸಾಹ ]
ನೂತನಂ : ಪೊಸತಂ [ ಹೊಸದು ]
ಭಾಗ್ಯ [ ತ್ಸ ] ಬಗ್ಗೆ [ ಸಂಪತ್ತು ]

೪೨ ಋಷಿ [ ತ್ಸ ] ರಿಸಿ [ ಮುನಿ ]
ವೃಷಭ : ಬಸವ [ ನಂದಿ ]
ಕೊಸಗು : ಬೆಟ್ಟದಾವರೆ [ ಬೆಟ್ಟದ ಕಮಲ ]
ಸಂತೋಷ [ ತ್ಸ ] ಸಂತಸ [ ಆನಂದ ]
ಆಳಿಕ : ಅಲೀಕ [ ಬರೆಯುದಿದ್ದುದು ]

೪೩ ತ್ಯಾಗಿ [ ತ್ಸ ] ಚಾಗಿ [ ದಾನಶೂರ ]
ಯೋಗಿ [ ತ್ಸ ] ಜೋಗಿ [ ಯತಿ ]
ಮಾಘಾ [ ತ್ಸ ] ಮಾಗಿ [ ಮಘಾ ನಕ್ಷತ್ರ ]
ಯಾಗ [ ತ್ಸ ] ಜಾಗ [ ಯಜ್ಞ ]



ಘೂಕಂ [ ತ್ಸ ] ಗೂಗೆ [ ಘೂಕಪಕ್ಷಿ ]
ಕಪಿಲೆ [ ತ್ಸ ] ಕವಿಲೆ [ ಕಂದುಬಣ್ಣದ ಆಕಳು ]

೪೪ ಪದಪ್ರ : ಸಂರಂಭಂ [ ಸಂಭ್ರಮ ]
ಪತಿವ್ರತೆ [ ತ್ಸ ] ಹದಿಬದೆ [ ಸಾಧ್ವಿ, ಗರತಿ ]
ಸುಧೆ [ ತ್ಸ ] ಸೂದೆ [ ಅಮೃತ ]
ವೇದಂ [ ತ್ಸ ] ಬೇದಂ [ ಬ್ರಹ್ಮಜ್ಞಾನದ ವಾಣಿ ]
ಚಾತುರ್ಯಂ [ ತ್ಸ ] ಚದುರ [ ಜಾಣತನ ]

೪೫ ನಱುಪು : ಸೌಸವಂ : ಕಂಪು [ ಸುವಾಸನೆ ]
ಅರಲು : ಕೆಸರು [ ಹಸಿ ಮಣ್ಣು ]
ಸಗ್ಗದೊಱೆ, ಬಾಂದೊಱೆ : ಸುರನದಿ [ ಆಕಾಶಗಂಗೆ ]
ನೆಱೆಯಱಿ, ತಱಿಸಂದುದು : ನಿಶ್ಚಯಾರ್ಥ [ ನಿರ್ಧಾರಮಾಡು ]

೪೬ ಪಱಿ : ವಸ್ತ್ರ [ ಅರಿವೆ ]
ಪೞಿ : ನಿಂದೆ [ ಹಳಿ ]
ಪೊಡೆ : ಜಠರಂ [ ಹೊಟ್ಟೆ ]
ಪುಸಿ : ಗಳಪುವುದುಂ [ ಸುಳ್ಳು ಹೇಳುವದು, ಗಳಹುವದು ]
ಪೊಱಮಟ್ಟುದು : ತಳರ್ದುದು [ ಹೊರಡುವದು ]
ಕೆಳರ್ದುದು : ವಿವಾದ [ ವಾದ ವಿವಾದ ]

೪೭ ಕಣೆ, ಸರಲ್ : ಅಂಬು [ ಬಾಣ ]
ಬಿಜ್ಜಣಿಗೆ : ಬೀಸಣಿಕೆ
ಬಿಂಕ : ಗರ್ವ [ ಸೊಕ್ಕು ]
ಬದ್ದಣ : ಒಸಗೆಯಪಱೆ [ ಚರ್ಮವಾದ್ಯ ]
ಗೊಂದಣ : ನಿಕರ [ ಸಮೂಹ ]

೪೮ ಶ್ರೀಖಂಡಂ [ ತ್ಸ ] ಸಿರಿಕಂಡಂ [ ಶ್ರೀಗಂಧ ]
ಶಿರೀಷ : ಸಿರಿಸ [ ಸಿರಸಲಗಿಡ ]
ಅಥಟು : ಕಡುಪು [ ಶೂರತನ ]
ದರ್ಪ : ಪಿರಿದು [ ದೊಡ್ಡ ]

ಇಂದ್ರ [ ತ್ಸ ] ಇಂಧಿರ [ ದೇವೇಂದ್ರ ]
ಚಂದ್ರ [ ತ್ಸ ] ಚಂದಿರ
೪೯ ಪರ್ವಿದುದು : ಕಾಡಿವರೆದುದು [ ಹಬ್ಬಿದ್ದು ]
ಉಗುರ್ವುಂ, ಅಗುರ್ವ : ಭಯಾನಕ [ ಅಂಜಿಕೆ ಬರುವ ]
ಜರ್ವ : ಜಂಕಣಿ [ ಯಕ್ಷಿಣಿ ]
ವಿಪ್ರ [ ತ್ಸ ] ಪಾರ್ವ [ ಬ್ರಾಹ್ಮಣ ]
ಗುಣ್ಪು : ಗಭೀರಂ [ ಗಂಭೀರ ]
೫೦ ಮುಟ್ಟವೆ : ಮಾಣಿಕ [ ರತ್ನಾಭರಣ ]
ಮುಟ್ಟು, ಪೊಲೆ : ಸೂತಕ [ ಅಶುಚಿ, ಅಶೌಚ ]
ಗದ್ದುಗೆ : ಪಟ್ಟವಣೆ : ನರೇಂದ್ರಾಸನಂ [ ಸಿಂಹಾಸನ ]
ಒಟ್ಟಜ : ಅತಿಶಯ [ ಬಹಳ ]
೫೧ ಐಯಂಬಂ : ಪಂಚಶರಂ [ ಐದು ಬಾಣಗಳುಳ್ಳವ, ಕಾಮು ]
ರಮ್ಯಂ [ ತ್ಸ ] ರೈಯಂ [ ಚಂದ ]
ಪರಾಕ್ರಮಂ : ಪ್ರಥಿತಂ [ ಶೂರತನ ]
ಬಲ್ಗೈಯಂ : ತಾರಕಮರ್ಥಂ : ಮುಯ್ಯಿವೊರ್ಗಂ [ಷಣ್ಮುಖ]
೫೨ ಪಚಂ : ತೊಡವೆ : ಆಭರಣ [ ಅಲಂಕಾರ ]
ಮೂರ್ಛೆ [ ತ್ಸ ] ಮುಚ್ಚೆ [ ಮೈಮರೆಯುವಿಕೆ ]
ಮಚ್ಚರ : ಮಾತ್ಸರ್ಯ [ ಹೊಟ್ಟೆಕಿಚ್ಚು ]
ಬಟ್ಟೆ : ಕೆಟ್ಟುದು [ ಹುರುಳಿಲ್ಲದ್ದು ]
ಮತ್ಸರ [ ತ್ಸ ] ಮಚ್ಚರಂ [ ಹೊಟ್ಟೇಕಿಚ್ಚು ]
೫೩ ಕಂಕಣ : ಬಳೆ
ಕೋಂಟೆ : ಕೋಟೆ
ಬಿಲ : ಹೋರು
ಶಂಕೆ [ ತ್ಸ ] ಸಂಕೆ [ ಅನುಮಾನ ]
ಗೋಣೆ : ಚೀಲ
ಸಬಳ : ಈಟಿ



ಅಂಕಣ : ಎರಡು ಕಂಬಗಳ ನಡುವಿ ಸ್ಥಳ
ಗಲ್ಲಂ : ಕೆನ್ನೆ
ಮಲ್ಲಂ : ಕುಸ್ತಿಯವನು, ಜಟ್ಟಿ
ತೋರಣ : ಬೀದಿ ಬಾಗಿಲುಗಳಿಗೆ ಕಟ್ಟುವ ಎಲೆ
ಮಲ್ಲಣಿ : ಮಲ್ಲಯುದ್ಧ ಮಾಡುವ
ಅಂಕ ಪಟ್ಟ : ಅಂಕದ ಕೊನೆಗೆ ಬಿಡುವ ವಸ್ತ್ರ
೫೪ ಅರರೆ, ಬಾಪುರೆ, ಮಝು, ಪೂತುರೆ, ಭಲರೆ, ಲೇಸು, ಜಾಗು, ಮಾಥಣು, ಥಿರುರೆ, ಪುರೆ, ಕೊಂಡಾಟ, ಅಚ್ಚರಿ, ಹೋಹೋ } ಕೊಂಡಾಟದ ಉದ್ಗಾರ, ಆಶ್ಚರ್ಯೋದ್ಗಾರ
೫೫ ಕೀಟ್ಪೊಡೆ : ಕೀಟಿಕೊಟ್ಟೆ [ ಕೆಳಗಿನ ಹೊಟ್ಟೆ ]
ನೀಟ್ಟು : ನಿಡಿದು [ ನೆಟ್ಟಗೆ ]
ಸೈಪು : ನೇರ್ಪು [ ಸುಕೃತ ]
ಕಾಳ್ಪುರ : ಕಾಲ್ಗೆ [ ನೀರಿನ ಪ್ರವಾಹ ]
ತಾಳ್ಪು : ಅಳ್ಪ [ ಹೊಂದು ]
೫೬ ಅಮಳ್ದಲೆವಕ್ಕಿ : ಭೇರುಂಡ [ ಎರಡು ತಲೆಯ ಪಕ್ಷಿ ]
ಭ್ರಮರ [ ತ್ಸ ] ಬಮರಂ [ ಭೃಂಗ ]
ರಶ್ಮಿ [ ತ್ಸ ] ರಸುಮೆ [ ಕಿರಣ ]
ಪ್ರಭೆ [ ತ್ಸ ] ಹವೆ [ ಪ್ರಕಾಶ ]
೫೭ ಪೂರಂ [ ತ್ಸ ] ಹೂರಂ [ ತುಂಬಿ ಹರಿಯುವ ಪ್ರವಾಹ ]
ಪಾರಾವತ [ ತ್ಸ ] ಪಾರಿವ [ ಪಾರಿವಾಳ ]
ಶೃಂಗಾರ [ ತ್ಸ ] ಸಿಂಗರ [ ಅಲಂಕಾರ ಮಾಡುವದು ]
ಅಂಗಾರಂ [ ತ್ಸ ] ಅಂಗರಂ [ ಅಗ್ನಿ, ಬೆಂಕಿ ]
೫೮ ಅಂಗಾರ ಸ್ಫೋಟಕೆ [ ತ್ಸ ] ಅಂಗರವೋಳಗೆ [ ಅಗ್ನಿ ಹೊರ ಹೊಮ್ಮುವದು ]

ಕಳಲ್ದುದು : ಕಳೆದದ್ದು [ ಕಳೆದುಕೊಂಡದ್ದು ]
ಅಂಗಣ [ ತ್ಸ ] ಅಂಗಳ [ ಮನೆಯ ಮುಂದಿನ ಸ್ಥಳ ]
ರಿಂಗಣ : ಕುಣಿಹ [ ಕುಣಿತ ]
೬೦ ಯಮಪುರ [ ತ್ಸ ] ಜವಹುರ [ ಯಮನ ಪಟ್ಟಣ ]
ಪಡಪವಳಂ : ಪಡಪಾಳಿ [ ಹಡಪದವ ]
ಬಾನಲ : ಮುಸುಳಿದುದು [ ಮೋಡದಿಂದ ಮುಸುಕಿದ್ದು ]
ರವಂ : ಉಲಿ [ ಸಪ್ಪಳ ]
ಸಿರಿ : ಐಶ್ವರ್ಯ [ ಸಂಪತ್ತು ]
ಅರಸ : ರಾಜ
ಅಳಂ : ಎಣೆ [ ಸಮಾನ ]
೬೧ ಕೂಸು : ಕೊಡಗೂಸು [ ಸಣ್ಣ ಮಗು ]
ಕೊಳಂಚೆ : ಕೊಳಚೆ [ ಕೊಳಕು, ಕೆಸರು ]
ಪುಣ್ಯ [ ತ್ಸ ] ಹೂಣ್ಯ [ ಸುಕೃತ ]
ಘೋಷಣೆ [ ತ್ಸ ] ಗೋಸಣೆ [ ಸಾರುವಿಕೆ ]
ಬಾಸಣೆ : ಮುಸುಕು [ ಮುಚ್ಚು ]
೬೨ ದೂಸಿಗವಸರ : ಸೀರೆಯ ಪಸರ [ ಜವಳಿ ಪಸಾರ ]
ಅಚ್ಚ : ವಿಮಲ [ ಸ್ವಚ್ಛ ]
ಪಾಸು : ಹಾಸಂ [ ಕೊರಳ ಪಟ್ಟಿ ]
ಸೊನ್ನೆ : ಚಿನ್ನ [ ಬಂಗಾರ ]
೬೩ ಬಕುಳಂ [ ತ್ಸ ] ವಕುಳಂ [ ಬಕುಳ ವೃಕ್ಷ ]
ಸುಖಂ [ ತ್ಸ ] ಸೊಕಂ [ ಸೌಖ್ಯ ]
ಒಸಗೆ : ಕೀರ್ತಿ [ ಯಶ ]
ಮಾರ್ದಂಗಿಕ [ ತ್ಸ ] ಮದ್ದಳಿಗ [ ಮದ್ದಲೆಕಾರ ]
ಛತ್ರಿಕೆ [ ತ್ಸ ] ಸತ್ತಿಗೆ [ ಕೊಡೆ ]
ಬಗೆ : ಚಿತ್ತಂ [ ಮನ ]
೬೪ ಅಶೋಕ [ ತ್ಸ ] ಅಸುಗೆ
ವಿಷಂ [ ತ್ಸ ] ಬಿಸ [ ನಂಜು, ವಿಷ ]



ಉದ್ಯೋಗ [ ತ್ಸ ] ಉಜ್ಜುಗ [ ಕಾಯಕ ]
ತ್ರಯೋದಶಿ [ ತ್ಸ ] ತೇರಸಿ [ ಪಕ್ಷದ ಹದಿಮೂರನೆಯ ದಿನ ]
ಅಲ್ಪ : ಅಣು [ ದೂಸರ ]
ಉಬ್ಬೆಗಂ : ತಾಪ [ ಉಷ್ಣತೆ ]
೬೫ ಪಟುಬಿಂಜಂ : ಅರಣ್ಯ [ ಅಡವಿ ]
ಕೊಳುಗುಳ : ಆಹವ [ ಕಾಳಗ ]
ಅಳ್ಕೆ, ಅಕ್ಕೆ : ಉಗ್ಗಡ [ ಅಳುವಿಕೆ ]
ಅಗ್ಗಳ : ಅಧಿಕ [ ಹೆಚ್ಚು ]
ಬರ್ದಿಲ : ನಿಳಪ : ನಿಲಯ [ ಸ್ವರ್ಗ ]
೬೬ ಕನ್ನಡಿ ಗೋಡೆ : ಕನ್ನವಡ [ ಕನ್ನಡಿಯ ಗೋಡೆ ]
ಪರಮೆ, ಬಂಡುಣಿ : ಭೃಂಗ [ ಭ್ರಮರ ]
ನೆಲ : ರಾಜ್ಯ [ ದೇಶ ]
ಬಾವನ್ನ : ಮಲಯಜಾತ [ ಶ್ರೀಗಂಧ ]
೬೭ ಪಂಚಂ : ಅಪೂರ್ವಂ [ ಹಿಂದೆ ಇಲ್ಲದ ]
ವಂಚನೆ [ ತ್ಸ ] ಬಂಚನೆ [ ಮೋಸ ಮಾಡುವದು ]
ಇಂಚರಂ : ಮಧುರನಿನದ [ ಇಂಪಾದ ಸ್ವರ ]
ಕೂಸಾಟಂ : ಚಿಣ್ಣರಾಟ [ ಸಣ್ಣಮಕ್ಕಳ ಆಟ ]
ಹಸನ : ಚಲ್ವ [ ಚಂದ ]
ನಿಂದೆ : ಚುನ್ನ [ ಹಳಿ ]
೬೮ ಅಂತಣಂ : ಏಕಾಂತ [ ಅಂತರಂಗ ]
ಸಂತಸ : ಹರ್ಷ [ ಸಂತೋಷ ]
ಸೂಚಿ [ ತ್ಸ ] ಸೂಜಿ
೬೯ ಸಹಜ [ ತ್ಸ ] ಸಾಜ [ ಸ್ವಾಭಾವಿಕ ]
ಹಂಸೆ [ ತ್ಸ ] ಅಂಚೆ [ ಹಂಸಪಕ್ಷಿ ]
ಕಾಚಂ [ ತ್ಸ ] ಗಾಜ
೭೦ ಇಟ್ಟಿ : ಬಿಟ್ಟೇರು [ ಬರ್ಚಿ, ಈಟಿ ]
ದಟಿಂ : ಥಟ್ಟು [ ದಂಡು ]

ವಸಂತ [ ತ್ಸ ] ಬಸಂತ [ ಚೈತ್ರ-ವೈಶಾಖ ಮಾಸ ]
ಘುಟಿಕೆ [ ತ್ಸ ] ಗುಟ್ಟಿ [ ಗುಟುಕು ]
ನೆಟ್ಟನೆ : ಋಜತೆ [ ಸತ್ಯ ]

೭೧ ಕೆಂಕಂ : ಕೆಂಪುಬಣ್ಣ [ ಕೆಂಪು ]
ಪೊಂಬಣ್ಣಂ : ಬಂಗಾರಬಣ್ಣ [ ಹಳದಿ ]
ಪಸುರುಂ : ಹಸಿರುಬಣ್ಣ
ಕಱಿದು : ಕಪ್ಪುಬಣ್ಣ
ಪೆರ್ದೊಱೆ ಕೆರೆ : ಕೊಳ [ ಸರೋವರ ]
ಮುತ್ತು ಕೆಂಬೊರಲು ಒಗೆವ : ಮುತ್ತು ರತ್ನಗಳು ಹುಟ್ಟುವ

೭೨ ನಳಿತೋಳ್ : ಉದ್ದತೋಳು
ಸೋಮುರ್ಡಿ : ಬಿಚ್ಚಿದ ಹೆರಳು
ಸೆಳ್ಳುಗುರು : ಉದ್ದವಾದ ಉಗುರು
ಎಳಲತೆ : ಎಳೆಬಳ್ಳಿ
ಇಮ್ಮಾವು : ಸವಿಯಾದ ಮಾವು
ಬಳೆ, ಕಾಚು : ಗಾಜು [ ಕಾಜು ]

೭೩ ಬಾಳ : ಲಾಮಂಚ [ ಬಾಳದ ಬೇರು ]
ಕರವಾಳಂ : ಕರವಾಳ್ [ ಕತ್ತಿ ]
ಪ್ರವಾಳ [ ತ್ಸ ) ಪವಳಂ [ ಹವಳ ]
ತುಱಿಲಾಳು : ಬಲ್ಬಂಟ [ ಶೂರ ]
ಮಹಾಕಾಳಿ [ ತ್ಸ ] ಮಾಕಾಳಿ [ ಶಕ್ತಿ ದೇವತೆ ]

೭೪ ಪೊಡವಿ : ಧಾತ್ರಿ [ ಭೂಮಿ ]
ತುಳಿಲ್ : ಪೊಡಮಡಿಕೆ [ ಸಾಷ್ಟಾಂಗವೆರಗು ]
ಕುಡುವು : ಕೊಂಕು [ ಬಾಗು ]
ಆಗಡೆ : ಆಗಳೆ [ ಆಗ ]

೭೫ ಎಕ್ಕೆಕ್ಕೆ : ತೇನತೇನ [ ಮೇಲಿಂದ ಮೇಲೆ ]
ಅಳ್ಕಱು : ನೇಹ [ ಪ್ರೀತಿ, ಸ್ನೇಹ ]



ಸುಸಿಲ : ಸುರತ [ ಸಂಭೋಗ ]

೭೬ ಬಾರಿಪುದು : ವಾರಿಪುದು [ ನಿವಾರಿಸುವದು ]
ಪೇರಣೆಲ : ಸೊಂದಿಗೋಡಗ [ ನರ್ತನಕಾರ, ಕೋಡಂಗಿ ]
ತವಿಲು : ಎಡರು : ದಾರಿದ್ರ್ಯ [ ಬಡತನ ]
ಸಪುರಂ : ಕಿಱಿದು [ ಸಣ್ಣದು ]
ಓರಂತೆ : ಒಂದೇ ತೆರನದು [ ಒಂದೇಸಮನಾಗಿ, ಕ್ರಮವಾಗಿ ]

೭೭ ತೊವೆ : ತೋವೆ [ ತೊವ್ವೆ ]
ಅಂಬಿಲ : ಕಟಿ [ ಅಂಬಲಿ ]
ತೊವರಿ : ತೊಗರಿ [ ತೊಗರೆಯ ಕಾಳು ]
ಕಪಿಲವರ್ಣ [ ತ್ಸ ] ಕವಿಲ್ವಣ್ಣ [ ಕಂದುಬಣ್ಣ ]
ಜೋಡು : ಸವಗಂ [ ಚಿಲಕತ್ತು, ಕವಚ ]
ಕರ್ಚಿದುದು : ತೊಳೆದುದು [ ತೊಳೆದು ಹಸನ ಮಾಡಿದ್ದು ]

೭೮ ಪಾಳುಂಬಳೆ : ಚಕ್ರ [ ಗಾಲಿಯಾಕಾರದ ಆಯುಧ ]
ಪೊಱವಾಱ : ಜಘನ [ ಸೊಂಟದ ಕೆಳಭಾಗ ]
ಪೊದಟ್ಟುದು : ಪೊಣ್ಮಿದುದು [ ಹೊರಹೊಮ್ಮಿದ ]
ಆಱಡಿ : ಪರಮೆ [ ಭ್ರಮರ ]
ಬಹಿತ್ರಕ [ ತ್ಸ ] ಬೈತ್ರಂ [ ಡೋಣಿ ]

೭೯ ಹೆಟ್ಟುಗೆ : ಕಾಮಿಸಿ [ ಗೆಳತಿ, ಹೆಂಗಸು ]
ಹುಟ್ಟುಗೆ : ಸೀರೆ [ ಉಡುವ ವಸ್ತ್ರ ]
ಸೋಗಿಲು : ಮಡಿಲು [ ಉಡಿ ]
ಎಱಿವೆಟ್ಟು : ಪಟ್ಟ [ ಪೀಠ ]
ಮಿಟ್ಟೆ : ಮಿಣ್ಣೆ [ ಒಂದು ವಿಧದ ಆಯುಧ ]

೮೦ ಪೆರ್ಮೆ : ಹೆಮ್ಮೆ [ ಘನತೆ ]
ಕೂರ್ಮೆ : ನೇಹ [ ಪ್ರೇಮ, ಸ್ನೇಹ ]
ಒರ್ಮೆ : ಒಮ್ಮೆ [ ಒಂದು ಬಾರಿ ]
ಮೆಯ್ಯ ನವಿರ್ಮೂಡಿತು : ಪುಳಕ [ ರೋಮಾಂಚ ]

೮೧ ಮುಮ್ಮೊನೆಗೈದು : ತಿಸುಳಂ [ ತ್ರಿಶೂಲ ]
ಮಟ್ಟ : ಪದುಳ [ ಸಮ ಸ್ಥಿತಿ ]
ಕೆಮ್ಮನೆ : ಸುಮ್ಮನೆ
ಬಿಮ್ಮನೆ : ಗಮ್ಮನೆ : ವಹಿಲಂ [ ರಭಸ ]
ದಿಮ್ಮಿದುದು : ಬಿಲ್ಪ [ ಪುಷ್ಟತೆ ]
೮೨ ನಿಗರಂ : ಉನ್ನತಂ [ ನೇರವಾಗಿ ನಿಂತ ]
ಬಟ್ಟಗೈದು : ಚಕ್ರ [ ದುಂಡು ಆಯುಧ ]
ಎಗ್ಗ : ಗಾವಿಲ [ ಮೂರ್ಖ, ಕಗ್ಗ ]
ಉದ್ಯೋಗ [ ತ್ಸ ] ಉಜ್ಜುಗ [ ಕೆಲಸ ]
ಗಾದಿಗೆ : ಅಗಳ [ ಕಂದಕ ]
೮೩ ಮಂಜರಿ : ತೊಡಂಬೆ [ ಗೊಂಚಲ ]
ಅಂಜನಂ : ಬೈಕೆಗಪ್ಪು [ ಕಾಡಿಗೆ ]
ಕಣಶ : ಮೃಗಪೋತ [ಚಿಗರೆಯ ಮರಿ ]
ಯಶ [ ತ್ಸ ] ಜಸ
ವಾಱುಂ ಜೌವನೆ : ಯುವತಿ [ ತರುಣ ಸ್ತ್ರೀ ]
೮೪ ಅರಮೆ : ಕಿಱಿದು [ ಸಣ್ಣದು ]
ಉಳ್ಳರಲ್ದುದು : ಒಳಗು ಬೀಗಿ ಬಿಱಿದುದು [ ಅರ್ಧ ಅರಳಿದ್ದ ]
ವಿದ್ಯಾಧರಿ [ ತ್ಸ ] ಬಿಜ್ಜೋದರಿ [ ವಿದ್ಯಾವತಿ ]
ಧೂರ್ತ [ ತ್ಸ ] ದುರುಳ [ ದುಷ್ಟ ]
೮೫ ಪಾಟ್ಮನೆಯಾಳ್ವಂ : ತುಡುಗುಣಿ [ ತುಡುಗು ತಿನ್ನುವವ ]
ನಲ್ಮೆ : ಶುಭ [ ಮಂಗಳ ]
ಒಳ್ಪು : ಲೇಸು [ ಒಳ್ಳೆಯದು ]
ನೀರ್ [ ತ್ಸ ] ನೀರಂ [ ಜಲ ]
ಕಾದಲ್ಮೆ : ನೇಹ [ ಸ್ನೇಹ ]
ನೇಸರ್ಗಲ್ : ಮಾರ್ತಾಂಡೋಪಲ [ ಸೂರ್ಯಕಾಂತಿಯ ಕಲ್ಲು ]
೮೬ ಉಡಿನೂಲ್ : ಕಟಿಸೂತ್ರ [ ಉಡುದಾರ ]
ಕೌಳುಡೆ : ನೂಡ [ ತಲೆಗಿಂಬು ]



ಆವಿಯೋಜನ : ಆಚಾರ್ಯ [ ಯೋಜಿಸುವವ ]
ಕನ್ನಡವಕ್ಕಿ : ಗಿಳಿ
ನಿಧಾನ : ಕಡವರ [ ನಿಧಿ ]
ಆಗಸಂ : ಅಂಬರಂ [ ಆಕಾಶ ]
೮೭ ಸ್ಫಟಿಕ [ ತ್ಸ ] ಪಳಕು [ ಪಟಿಕ ]
ಪಡವಳ : ಪಡಿಯರ [ ಸೇವಕ ]
ಅಮರ್ಕೆ : ಅಳವಟ್ಟುದು [ ಹೊಂದುವಿಕೆ ]
ಮಿಳಿರು : ಚಂಚಲತೆ [ ಚಲಿಸುವ ]
ಅವ್ವಳಿಸಿತು : ಮೇಲ್ವಾಯ್ದುದು [ ಮೇಲೆ ಹಾಯು ]
೮೮ ಮೂವಮೆ : ಮೂಱುಂಸೂಳ್ [ ಮೂರು ಸಲ ]
ಮಹಿಮೆ [ ತ್ಸ ] ಮೈಮೆ [ ಮಹಾತ್ಮೆ ]
ನಿಧಾನಂ [ ತ್ಸ ] ನಿದನ [ ಸಾವಕಾಶ ]
ಕೈಮೆ: ಮಾಟ : ಮೈರಲೆ [ ಮಂತ್ರ-ತಂತ್ರ ]
ಹೇಮಂತ : ಮಂಜುಗಾಲ [ ಮಾರ್ಗಶೀರ್ಷ ಪುಷ್ಯ-ಮಾಸಗಳು ]
೮೯ ಪೆಱತು, ಪೆಱಂ, ಪೆಱಳು [ ಹೊರಗಿನದು ]
ಮುಕ್ಕುಱಿಕಿದುದು : ಮುತ್ತಿದುದು [ ಮುತ್ತಿಗೆ ಹಾಕು ]
ಇಡಿಕಿಱಿದುದು : ಕೀವಿದುದು [ ತುಂಬಿದ್ದ ]
೯೦ ವಿರಹಿ [ ತ್ಸ ] ಬಿರಯಿ [ ವಿಯೋಗ ಹೊಂದಿದ ಪ್ರಣಯಿ ]
ಚೌವಟೆ : ನಾಲ್ವಟ್ಟೆ [ ನಾಲ್ಕು ದಾರಿಗಳು ಕೂಡುವ ಸ್ಥಳ ]
ಏಕ್ಕಸರ : ಏಕಾವಳಿ [ ಒಂದೇ ಎಳೆಯ ಸರ ]
ಗರಗರಿಕೆ : ಚೊಕ್ಕಟ [ ಹಸನ ]
ಸೀವರಂ : ತುಷಾರಂ [ ತಂತುರ್ವನಿ/ ಸಣ್ಣಹನಿ ]
೯೧ ಬೇಗುದಿ : ಸಂತಾಪ [ ಕಷ್ಟ ]
ಸೀಗುರಿಸಿತು : ವಿಭ್ರಮ [ ಭ್ರಾಂತಿ ]
ಕೇಗಿದುದು : ಕೇಕಾರುತಿ [ ಕೂಗು ]
ಸೋಗೆ : ಗಂಡುನವಿಲು

೯೨ ಕುತ್ತುರು : ಹೊದರು [ ಗಿಡದ ಪೊಳ್ಳು ]
ಕುತ್ತಿಸಳು : ಕಿಱುವೆಸಳು [ ಸಣ್ಣ ಎಸಳು ]
ಪೊದಟ್ದುದು : ಪೊಱಪೊಣ್ಮಿತ್ತು
ತಹಿ : ಜತ್ತು [ ಜೋಡು, ಜತೆ ]
ನೆಗಟ್ತಿ : ಪ್ರಸಿದ್ಧ ( ಪ್ರಕಟ )

೯೩ ಸ್ಫಟಿ [ ತ್ಸ ] ಪೆಡೆ ( ಹೆಡೆ )
ಜಟಿ [ ತ್ಸ ] ಜಡೆ ( ಜುಟ್ಟು )
ತಟ [ ತ್ಸ ] ತಡಿ ( ದಂಡೆ )
ತಟಂ [ ತ್ಸ ] ದಡಂ ( ದಂಡೆ )
ಜೂಡ [ ತ್ಸ ] ಜೂಟ ( ಜಡೆ )
ಆಟವಿ [ ತ್ಸ ] ಅಡವಿ ( ಅರಣ್ಯ )
ಬಹುರೂಪಿಣಿ : ಕೊಲ್ಲಟಗಿತ್ತಿ ( ಡೊಂಬತಿ )
ಲಾಟ : ಲಾಳಿ ( ಗುರ್ಜರ ದೇಶ )

೯೪ ಕಿಳಿರು : ಹಯನಿನದ ( ಕುದುರೆಯ ಹೇಕರಿಕೆ )
ಹಂಗುಳಿ : ಕಾಲ್ಮಣೆ ( ತೀಟಣಿಗಿ ):
ಒಱಲ್ದುದು : ಒಲ್ದುದು ( ಒಲಿದದ್ದು )
ಕಾತಳಿಗ : ಆತುರಮಂ ತಳೆದಂ ( ತೀವ್ರ ಬಯಕೆ ತಾಳಿದನು )
ಮಾನುಷ [ ತ್ಸ ] ಮಾನಿಸ ( ಮನುಷ್ಯ )

೯೫ ಕಾವಣ : ಪಂದರ್ ( ಹಂದರ )
ಗಾವರ : ಅಬ್ಬರ ( ಆರ್ಭಟ )
ಪುಗಿಲ್ಪುಗಿಲೆ ನಿಪಾರಾವಂ : ಕೋಕಿಲ ನಿನದಂ (ಕೋಗಿಲೆಯ ಸ್ವರ)
ಡಾಮರ ( ತ್ಸ ) ಡಾವರ ( ದಂಗೆ )

೯೬ ಚಾಮರ ( ತ್ಸ ) ಚವರ
ಉಡವಳಿಕೆ : ಕಾಳಂಜಿ ( ನೀರು ತಂತುರಿಸುವ ಸಾಧನ, ಕಾರಂಜಿ )
ಪಾಮರ : ಗರ್ವ ( ಬಿಂಕ )



ಸಾವಸ : ಆಮೋದ ( ಆನಂದ )
ವಿಸ್ಮಯ ( ತ್ಸ ) ಬಿಸವಂದವ ( ಆಶ್ಚರ್ಯ )

೯೭ ನಿಗ್ಗವ : ಗಜದಂತ ( ಆನೆಯ ಹಲ್ಲು )
ಅಗ್ನಿ ( ತ್ಸ ) ಹಗ್ಗಿ ( ಬೆಂಕಿ )
ಯುಗ ( ತ್ಸ ) ಜುಗ ( ವರ್ಷ )
ಮೊಗ್ಗು : ವಶ ( ಅಧೀನ )
ಸಗ್ಗ : ನಾಕಲೋಕ ( ದೇವಲೋಕ )

೯೮ ತಳವೆಳಗು : ನಿಬ್ಬರ ( ತುಂಬಿದ )
ಇರ್ಕುಳಿಗೊಂಡುದು : ಸೆಳೆದುಕೊಂಡದ್ದು ( ಎಳೆದುಕೊಂಡದ್ದು )
ಉಳು : ( ಎಂಜಲ )
ಉಬ್ಬಿಗಾಗುಳ : ಅರೋಚಿಕೆ ( ರುಚಿಯಿಲ್ಲದಾಗು )

೯೯ ಬೆಕ್ಕಸ : ಆಶ್ಚರ್ಯ ( ಸೋಜಗ )
ಸಂಸ್ಕೃತ ( ತ್ಸ ) ಸಕ್ಕದ ( ದೇವನಾಗರಿ )
ಸವಣ್ಮನೆ : ಬಸದಿ ( ಶ್ರವಣರ ಮನೆ, ಬಸ್ತಿ )
ಕೊಟ್ಟಜ : ಕಪ್ಪ ( ಕಾಣಿಕೆ )
ಅಕ್ಷಿ ( ತ್ಸ ) ಅಚ್ಚಿ ( ಕಣ್ಣು )

೧೦೦ ನಲ್ : ಒಳ್ಳಿತು ( ಶುಭ )
ವಾಕ್ಯ : ಸೊಲ್ಲು ( ಶಬ್ದಗಳ ಅರ್ಥ ಪೂರ್ಣ ಕೂಡಿಕೆ )
ರಿಗ್ಗವಣೆ : ಮೃದಂಗ ( ಚರ್ಮ ವಾದ್ಯ )
ಮೆಲ್ಪು : ಮೆಲ್ಲಿತು ( ಮೆತ್ತಗಿನ )
ಪೂವಡಿಗಂ : ಪುಲ್ಲವಡಿಗ ( ಹೂಗಾರ )

೧೦೧ ಕರ್ತರಿ ( ತ್ಸ ) ಕತ್ತರಿ ( ಕತ್ತರಿಸುವ ಸಾಧನ )
ಜಂಗುಳಿ : ಮೊತ್ತ ( ಗುಂಪು )
ದಂಪಿಣಿ : ಜೋಡು ( ಜೊತೆ )
ಕುಸ್ತುಂಬರಿ ( ತ್ಸ ) ಕೊತ್ತುಂಬರಿ ( ಕೋತಂಬರಿ )
ಕಬ್ಬ : ಚಿತ್ತಾಣ ( ಕಾವ್ಯದ ಒಂದು ಪ್ರಕಾರ )

೧೦೨ ತೇಂಗುಹಂ : ಪಕ್ಕಿ ( ಪಕ್ಷಿ )
ವೆಂಗುಹಂ, ಅಕ್ಕಟ : ಆಶ್ಚರ್ಯ ( ಸೋಜಿಗ )
ಪಾಂಗು : ಭಂಗಿ ( ಬಗೆ )
ಗೊಂದಣ : ಸರಸ ಮೊಗ್ಗು ( ಗುಂಪಾಗು )

೧೦೩ ಮತ್ತರು : ಅಲಸಿದರು ( ಅರಿವಿಲ್ಲದವರು )
ಪವಣ್ಗೆತ್ತುದು : ಭಾವಿಸಿದುದು ( ಪ್ರಮಾಣ )
ಬಿನ್ನಣಿ : ಬಿತ್ತಿಗ ( ವಿಜ್ಞಾನಿ )

೧೦೪ ಕೊವರಂ, ಬಾಂಬಂ, ಕುಂಬರ ( ಕುಂಬಾರ )
ಅವಗಡಿಸು : ಅವಗ್ರಹ ( ತೊಂದರೆ )
ಎಳೆದಳಿರ್ : ತೊವಲ್ ( ಎಳೆಯ ಎಲೆ )
ಮುಯ್ಪು : ಮುಡುಪು ( ಕಾಣಿಕೆ )
ಉಗ್ಗು : ಬಿಕ್ಕು ( ಬಿಕ್ಕುತ್ತ ಮಾತಾಡುವದು )

೧೦೫ ಕೂವೆ : ಮುಂಬತಿ ( ನೌಕೆಯ ಹಾಲುಗಂಬ )
ರಕ್ತಾಮಣಿ ( ತ್ಸ ) ರಕ್ಕವಣಿ
ತೀವ್ರ ( ತ್ಸ ) ತಿಬ್ಬ ( ಲಗುಬಗೆ )
ಸಬ್ಬ : ಹಾಸ್ಯ ( ವಿನೋದ )

೧೦೬ ತಿಬಿದುದು : ಕೊಯ್ದುದು ( ಹರಿದದ್ದು, ತರಿದದ್ದು )
ಕುರುಂಪು : ಕುರುಹು ( ಗುರುತು )
ಗೋಪಕಾಮಿನಿ : ತುಱುಗಾರ್ತಿ ( ಗೋಪಿಕೆ )
ಕಣ್ಮಲರ್ದುದು : ಕಣ್ಬೇಟ ( ಕಣ್ಣುಹೊಡೆ, ಕಾಮಸಂಜ್ಞೆ )

೧೦೭ ಕಿಸುಗಣ್ಚಿದನು : ಕೋಪಿಸಿ ನೋಡಿದನೆಂಬ ಪಾಂಗು
( ಕಣ್ಣು ಹಿಗ್ಗಿಸಿ ನೋಡಿದನೆಂಬ ಬಗೆ )
ಧೈರ್ಯತ್ವ : ದೀವಸ ( ದಿಟ್ಟತನ )
ದಿನದೂನಿಸಿದ : ಭೀತಿಕಾರ ( ಅಂಜುಗುಳಿ )

೧೦೮ ವ್ಯಸನ ( ತ್ಸ ) ಬೆಸನ ( ಚಿಂತೆ )
ಪಸಾಯಿತು : ಪಡವಳ, ಪ್ರತಿಹಾರಿಕ ( ಬಾಗಿಲು ಕಾಯುವವ )



ಕಟ್ಟಗೆ : ಕಾರಗೆ ( ಕಾರ )
ಕಿಸುರ್ವೇರ : ಮರುಹೇಯೌಷಧ ( ವಿಸ್ಮೃತಿಯುಂಟಾಗುವ ಔಷಧ )

೧೦೯ ತಾಣಾತರಂ : ಠಾಣಯವು [ ಸ್ಥಳ ]
ಕಜೋಯಿ : ಚಪ್ಪೆ [ ಸಪ್ಪೆ ]
ಪೆಜಿಗು : ಪಿಂತಾಣಿಯದು [ ಹಿಂದೆ ಸರಿ ]
ಗಾನ [ ತ್ಸ ] ಗಾಣ
ಸೈಪು : ಪುಣ್ಯ [ ಸುಕೃತಿ ]

೧೧೦ ಬಿಸುಗಲ್—ರವಿಕಾಂತ [ ಬಿಸಿಲ್ಗಲ್ಲು; ಸೂರ್ಯಕಾಂತ ]
ಚಂದಗಲ್ : { ಕುಳಿರ್ಗಲ್ / ಒಸರ್ಗಲ್ } [ ತಂಪು ಕಲ್ಲು, ಚಂದ್ರಕಾಂತ ಶಿಲೆ
ಕರ್ಬೊನ್ಗಲ್ ಸೂಜಿಗಲ್ [ ಲೋಹಚುಂಬಕ ]

೧೧೧ ಮುಗಿಲ್ಗಲ್ : ಆಲಿವರಲ್ [ ಆಲೆಕಲ್ಲು, ಆಣೇಕಲ್ಲು ]
ಕಾರ್ಮುಗಿಲ್ಗಿಚ್ಚು : ಸಿಡಿಲ್ [ ಸಿಡಿಲು ]
ಮುಗಿಲ್ವೆಳಗು : ಮಿಂಚು [ ಮೋಡದಿಂದ ಹೊರಡುವ ಬೆಳಕು ]
ಸೋನೆ : ತಂದಲ್ [ ಧಾರಾಕಾರ ಸುರಿಯುವ ಮಳೆ, ಜಡಿಮಳೆ ]
ಪಟುವಗಿಚ್ಚು : ಕಾಟ್ಗಿಚ್ಚು [ ಬೇಗೆ ]

೧೧೨ ಕಡಲುರಿ : ಮುನ್ನೀರ್ಗಿಚ್ಚು / ವಡಬಾನಲ [ ಸಮುದ್ರಗಿಚ್ಚು ]
ಇಂಗಳ : ಕೆಂಡ [ ಬೆಂಕಿ ]
ಕಳ್ತಡವು : ಕಿಸುರಕ್ಕರ [ ಕೆಂಪು ಮಸಿಯ ಅಕ್ಷರ ]
ನುಡಿ : ಸದ್ದುಗೆ [ ಮೂಲಾಕ್ಷರ ]

೧೧೩ ಕುಳಿರ್ವೆಟ್ಟಣುಗಿ : ಉಮೆ [ ಹಿಮವಂತನ ಮಗಳು, ಗಿರಿಜೆ ]
ತಿಳಿಯಂಗಡಲಣುಗಿ : ರಮೆ [ ತಿಳಿಯಾದ ಕ್ಷೀರಸಾಗರ ಪುತ್ರಿ ಲಕ್ಷ್ಮಿ ]
ಬಳರಿ : ಮಹಾಕಾಳಿ [ ಶಕ್ತಿದೇವತೆ ]
ತಿಳಿ : ಬಾಚಿಸಿತು [ ಸ್ವಚ್ಛಮಾಡಿತು ]

೧೧೪ ಪಸಿರ್ವುಲ್ಬೆಳೆದೆಡೆ : ಪಸಲೆ [ ಹಸಿರು ಹುಲ್ಲು ಬೆಳೆದ ನೆಲ ]
ಸುಗ್ಗಿ : ಬಸಂತ [ ವಸಂತ ಋತು ]
ನಸಿಮಣಿ : ಒಸರ್ಗಲ್ [ ಚಂದ್ರಕಾಂತ ಶಿಲೆ ]
ಪಿಂಜರಿ : ಬೆಳ್ಳಿ

೧೧೫ ಆರ್ದಲೆಯಂ : ಮೂಱುಮೊರ್ಗಂ [ ಷಣ್ಮುಖ ]
ಸೋದುದು, ಹಮ್ಮದ, ಬೋದುದು : ಮೂರ್ಛೋದಯಂ
[ ಎಚ್ಚರದಪ್ಪು ]
ದೊರೆ : ಸಾಮ್ಯ [ ಸಮವಾದ ]

೧೧೬ ಕೇತಕಿ [ ತ್ಸ ] ಕೇದಗೆ [ ಕೇದಿಗೆ ]
ಜಾತಕ [ ತ್ಸ ] ಜಾದಗೆ [ ಜನ್ಮಪತ್ರಿಕೆ ]
ಚಂಪಕ [ ತ್ಸ ] ಸಂಪಗೆ [ ಸಂಪಿಗೆ ]
ಜಾತಿ [ ತ್ಸ ] ಜಾದಿ [ ಜಾಜಿಮಲ್ಲಿಗೆ ]

೧೧೭ ವಿಮಲ : ವೈಮಲ್ಯ [ ಸ್ವಚ್ಛ ]
ತರತಮ [ ತ್ಸ ] ತಾರತಮ್ಯ [ ಹೆಚ್ಚುಕಡಿಮೆ ]
ಔತ್ಸುಕ್ಯ [ ತ್ಸ ] ಉಚ್ಚುಕ [ ಹುರುಪು ]
ರಮಣ, ರಮಣೀಯ್ಯ : ರಾಮಣೀಯ [ ಅಂದವಾದ ]

೧೧೮ ಲಾಕಂ : ಲಾಕುಳ [ ಬಡಿಗೆ ]
ಕಾಕ [ ತ್ಸ ] ಕಾಗೆ
ವಾಟ : ಬಾಡಗ [ ಊರು ]
ಕೋಕಂ : ಪೊಣರ್ವಕ್ಕಿ [ ಚಕ್ರವಾಕ ಪಕ್ಷಿ ]
ಟೀಕೆ : ಟಿಪ್ಪಣಿ [ ವಾಕ್ಯಾರ್ಥ ]

೧೧೯ ಕೌಶಲ್ಯಂ [ ತ್ಸ ] ಕುಸಲಂ [ ಕುಶಲತನ ]
ಪಾರವಶ್ಯಂ [ ತ್ಸ ] ಪರವಸಂ [ ಪರಾಧೀನತೆ ]
ಪೈಶೂನ್ಯಂ [ ತ್ಸ ] ಪಿಸುಣಂ [ ಕೆಡುಕ ]
ವೈಶಸನಂ [ ತ್ಸ ] ವಿಸಸನಂ [ ಶಾಸನ ]



೧೨೦ ವಿಷಮಂ : ವೈಷಮ್ಯಂ [ ವಿಷಮತೆ, ಹೆಚ್ಚು–ಕಡಿಮೆ ]
ಮಾಹಿಷ : ಮಹಿಷ [ ಕೋಣ ]
ವಿದ್ವಿಷ : ವಿದ್ವಾಂಸ [ ಪಂಡಿತ ]
ವಿಷಯ : ವೈಷಯ [ ಸಂಗತಿ [

೧೨೧ ಪಟ್ಟವಣೆ : ಸಿಂಹಪೀಠ [ ಸಿಂಹಾಸನ ]
ಪಟ್ಟೆಳೆ : ದುಗುಲ [ ತಿಳುವಾದ ರೇಶಿಮೆಯ ವಸ್ತ್ರ ]
ದೂದವಿ : ಕುಟ್ಟನಿ [ ಕುಂಟಲಗಿತ್ತಿ :
ವಜ್ರ [ ತ್ಸ ] ಬಜ್ಜರ [ ಬಿಳಿಯ ರತ್ನ ]

೧೨೨ ಸೋರ್ಮುಡಿ : ಬಿಚ್ಚಿದ ಹೆರಳು
ಚಂದಳಿರು : ಚಂದವಾದ ಎಲೆ
ಎಳಲತೆ : ಎಳೆಯ ಬಳ್ಳಿ
ಕಾರ್ಮುಗಿಲ್ : ಮಳೆಗಾಲದ ಮೋಡ
ಒಳ್ಪಾತು : ಒಳ್ಳೆಯ ಮಾತು
ನೀಟ್ಟ : ಉದ್ದವಾದ
ಕಣ್ಮಲರ್ : ಕಣ್ಣೆಂಬ ಹೂವು
ಇಂಗದಿರ್ : ಅಮೃತಕಿರಣ
ಇರ್ಮಡಿ : ಎರಡುಪಟ್ಟು
ನುಣ್ದೊಡೆ : ನಯವಾದ ತೊಡೆ
ಬಡನಡು : ಸಣ್ಣದಾದ ನಡು
ಪೆರ್ಮೊಲೆ : ದೊಡ್ಡ ಕುಚ

೧೨೩ ದೂದವಿ : ಕುಂಟಣಿ [ ಕುಂಟಣಿಯಾದ ಸ್ತ್ರೀ ]
ಇಚ್ಚೆಗಾರ್ತಿ : ರತಿ [ ಕಾಮೇಚ್ಛೆಯುಳ್ಳವಳು ]
ನೀಲ : ರಾಜಾವರ್ತ [ ನೀಲರತ್ನ ]
ಜೋದರ್ : ಗಜಜೀವರ್ [ ಮಾವಟಿಗ, ಮಾವುತ ]

೧೨೪ ಸೈಪು : ಪುಣ್ಯ [ ಸುಕೃತಿ ]
ಕೈಪಿಡಿ : ದರ್ಪಣ [ ಕನ್ನಡಿ ]

ಓಪಳ್ : ಪ್ರಾಣೇಶ್ವರಿ [ ಹೆಂಡತಿ ]
ಕೈಪೆ : ಕಹಿ [ ವಿಷ ]

೧೨೫ ವಿಸಸನ : ಕದನ [ ಕಾಳಗ ]
ಕಸವರ : ದ್ರವ್ಯ [ ಹಣ ]
ಬಿಲಲುಂ : ಮೂರು [ ಕ್ರಯ ತೆಗೆದುಕೊಂಡು ಕೊಡುವದು ]
ವ್ಯಸನ [ ತ್ಸ ] ಬೆಸನ [ ಚಿಂತೆ ]
ಸುಸಿಲ್ : ಸುರತ [ ಸಂಭೋಗ ]

೧೨೬ ದಿಮ್ಮಿದರು : ದೊಡಿತು [ ದೊಡ್ಡ ಜಿಡ್ಡಿ ]
ಬ್ರಹ್ಮ [ ತ್ಸ ] ಬೊಮ್ಮ [ ಬ್ರಹ್ಮದೇವ ]
ಕಾಮ [ ತ್ಸ ] ಕಾವ [ ಮನ್ಮಥ ]
ಕಮ್ಮನೆ : ಪರಿಮಳ [ ಸುಗಂಧ ]
ಕೆಮ್ಮನೆ : ಸುಮ್ಮನಿರ್ಪುದು [ ಸುಮ್ಮನೆ ಇರುವದು ]

೧೨೭ ಇನಿವಿಲ್ಲಂ, ಸಿರಿಗಂಡ, ನನೆಗಣೆಯಂ : ಕಾಮ [ ಮದನ ]
ಇನಿಯಳು : ವಲ್ಲಭೆ [ ಹೆಂಡತಿ ]
ಕನಲು : ಕೋಪ [ ಸಿಟ್ಟು ]

೧೨೮ ಬಂಡುಣಿ : ಷಟ್ಚರಣಂ [ ಭ್ರಮರ ]
ಸರಿಮಿಂಡಿ : ಪ್ರಾಯದಿಂದ ಸೊರ್ಕುವಬಲೆ
[ ಯೌವನವತಿಯಾದ ಸ್ತ್ರೀ ]
ಬಂಡಣಂ : ಸಂಗ್ರಾಮಂ [ ಕಾಳಗ ]
ಕೊಂಡುದು : ಧರಿಸಿದುದು [ ಹಾಕಿಕೊಳ್ಳು ]

೧೨೯ ನುಡಿವಕ್ಕಿ : ಗಿಣಿ
ಪಡಿಯರವಕ್ಕಿ : ಕೋಗಿಲೆ [ ಕೋಕಿಲೆ ]
ನಡೆವಕ್ಕಿ : ಹಂಸ [ ಹಂಸಪಕ್ಷಿ ]
ತೊಡರ್ವಕ್ಕಿ : ಚಕ್ರವಾಕ [ ಜಕ್ಕವಕ್ಕಿ ]

೧೩೦ ಮರುವಕ್ಕ : ಮರುವಡೆ [ ವೈರಿಗಳ ದಂಡು ]
ಗರಿವೂವು : ಕೇತಕಿ [ ಕೇದಗೆ ]



ಜರುಚ : ಕಾಳ್ಗಿಡವ [ ನಿಂದಿಸುವವ ]
ನೇಸರ್ : ದಿನನಾಥ [ ಸೂರ್ಯ ]

೧೩೧ ತಂದಲ್ : ಸೋನೆ [ ಜಡಿಮಳೆ ]
ವೆಗ್ಗ : ಗಾಂಪ [ ಕಗ್ಗ ]
ಚಂದ್ರ [ ತ್ಸ ] ಚಂದ [ ಚಂದ್ರ ]
ಕುಡಿಯಂದ : ಶೂದ್ರ [ ನಾಲ್ಕನೆಯ ವರ್ಣದವ ]

೧೩೨ ಅಱ : ಧರ್ಮ [ ಶಿಷ್ಟತೆಯ ಗುಣ ]
ಬಾಂದೊಱೆ : ಸುರಸಿಂಧು [ ಆಕಾಶಗಂಗೆ ]
ಪಲ್ಲಮರಿ : ಕಲಭ [ ಆನೆಯಮರಿ ]
ಕುಱುವು : ಮಲ್ಲಿಗೆ [ ಮಲ್ಲಿಗೆ ಹೂವು ]
ಕರಿ : ಕರ್ಪು [ ಕಪ್ಪು ಬಣ್ಣ ]

೧೩೩ ಕನ್ನಡ ದೇಸಿಯಂ : ಅಚ್ಚ ಕನ್ನಡದ
ಅನಂತಾರ್ಥ : ಅನೇಕಾರ್ಥ
ಬುಧಸಮೂಹ : ಪಂಡಿತರ ಸಮೂಹ
ಅರಿವಂದದೆ : ತಿಳಿಯುವ ಹಾಗೆ
ಕವಿಚಿಂತಾಮಣಿಯೆನಿಪ : ಕವಿರತ್ನನೆನಿಸಿದ
ತಿಪ್ಪರಸಂ : ತಿಪ್ಪರಸ ಕವಿಯು
ಸಂತಸದಿನರುಪಿದಂ : ಸಂತೋಷದಿಂದ ತಿಳಿಸಿದನು.

೧೩೪ ವಾಣಿಗೆ : ಸರಸ್ವತಿಗೆ
ಜಾಣೆಗೆ : ಬುದ್ಧಿಮತಿಗೆ
ನೆರೆ [ ನೆಱೆ ] ಕಲ್ಯಾಣಿಗೆ : ಚೆನ್ನಾದ ಮಂಗಳಕರಳಾದವಳಿಗೆ
ಮೊಕ್ಷಾಗ್ರಕಡಬಿಲುಜ್ಜುಗಿಸಿದ : ಮೋಕ್ಷಾಗ್ರಕ್ಕೆ ಏರಲುಸಿದ್ಧಳಾದ
ನಿಶ್ರೇಣಿಗೆ : ಘನವಂತನಿಗೆ
ಸರೋಜಪಾಣಿಗೆ : ಕೈಯಲ್ಲಿ ಕಮಲ ಹಿಡಿದವಳಿಗೆ
ನಾನೆಱಗೆ : ನಾನು ನಮಿಸಲು

ಅಮೋಘವರದೆಯಪ್ಪಳ್ : [ ಅಮೋಘ ವರವನ್ನು
ಕೊಡುವವಳಾಗುವಳು ]

೧೩೫ ಪಗಲೊಂದಕೊಂದು ಕಬ್ಬವ [ ಒಂದು ದಿನಕ್ಕೆ ಒಂದು ಕಾವ್ಯವನ್ನು
ನೆಗಳಲ್ ಚಾತುರ್ಯಮಿರ್ದೊಡಂ : ರಚಿಸುವ ಚತುರತೆಯಿದ್ದರೂ
ತಪ್ಪದ ಮೋಘಂ : ತಪ್ಪದೆ ಅಮೋಘವಾದ
ಕಣ್ಣಿಲ್ಲದೆ ಜಗವ ತೊಳಲುವನೆಂಬ : ಕಣ್ಣು ಕಾಣದೆ ಜಗತ್ತನ್ನು
ಸಂಚರಿಸುವನೆಂಬ

ಮುಗುದನ ಮಾತೆಂತುಟು : ಮುಗ್ಧನ ಮಾತು ಹೇಗಿರುವದು

೧೩೬ ಸಂಧಿ ವಿಭಕ್ತಿ ಸಮಾಸಗಳಿಂದವನು : ಸಂಧಿ ವಿಭಕ್ತಿ ಸಮಾಸಗಳ
ಸೊಬಗನ್ನು

ಅವಱಿಡೆಯೊಳಿಯ್ದು ತುಱುಸಿದ : ಅವರ ಬಳಿಯಲ್ಲಿ ಹೋಗಿ
ತುಂಬಿದ

ತತ್ಪದ ಬಂಧವನರಿಯದೆ : ಆ ಪದಗಳ ಹೊಂದಾಣಿಕೆ ತಿಳಿಯದೆ
ಮಂದಿಯ ಕಂಡೂಟ್ವ ನಾಯೆ : ಮಂದಿಯನ್ನು ಕಂಡು
ನಿಷ್ಕಾರಣ ಕೂಗುವ ನಾಯಿಯಂತೆ

ಪೇಳ್ವಂ : ಹೇಳುವನು

೧೩೭ ವಾಕ್ಶ್ರೀ ನಿಧಾನ ಕವಿ ಬೊಮ್ಮರಸಂ : ವಾಕ್ ಶ್ರೀಯುಳ್ಳ
ಕವಿ ಬೊಮ್ಮರಸನು

ಪರಿವಿಡಿದೀ ಕರ್ನಾಟಕ ಸರಸ ಕವೀಂದ್ರರ್ಕಳ್ :
ಕ್ರಮದಿಂದ ಈ ಕರ್ನಾಟಕದರಸಿಕ ಕವೀಂದ್ರರು
ಒಳ್ಳಿತಾದುದೆನಲ್ ಒಲವಿಂಬಿತ್ತರಿಸಿದಂ : ಒಳ್ಳೇದಾಯಿತೆನ್ನಲು
ಒಲವಿನಿಂದ ವಿಸ್ತರಿಸಿ ಹೇಳಿದನು.

**ಸಮಾಪ್ತ**

## ನಮ್ಮ ಇತ್ತೀಚಿನ ಪ್ರಕಟನೆಗಳು :

* ನನ್ನ ಪತಿ ನನ್ನ ದೇವರು —ಶ್ರೀಮತಿ ಲಲಿತಾಶಾಸ್ತ್ರಿ ೩.೨೫
* ಸಾವಿತ್ರಿ —ರಂ. ಶಾ. ೩.೭೫
* ನಂಜು-ನೇಹ —ಯಾಮಿನಿ ೩.೫೦
* ಗೀತಾಂಜಲಿ —ಟಾಗೋರ-ಅ. ಪ್ರಲ್ಹಾದ ನರೆಗಲ್ಲ ೫.೦೦
* ಗುಲಿಸ್ತಾನ ಪರ್ಶಿಯದ ಕಥೆ —ಶೇಖಸಆದಿ ೫.೦೦
* ಪದ್ಮ ಪುರಾಣ ಕಥೆ —ಪಂ. ಭುಜಬಲಿ ಶಾಸ್ತ್ರಿ ೩.೨೫
* ಭಾರತದ ಹಬ್ಬ ಹರಿದಿನಗಳು —ಡಿ. ಟಿ. ರಂಗಸ್ವಾಮಿ ೩.೦೦
* ಸಂಕ್ಷಿಪ್ತ ಇಂಗ್ಲೀಷ ಸಾಹಿತ್ಯಚರಿತ್ರೆ —ಪ್ರೊ. ರಮಾನಂದ ೫.೦೦
* ಇಂಗ್ಲೀಷ ಸಂಭಾಷಣೆಯ ಕಲೆ —ಪ್ರೊ. ರಮಾನಂದ ೬.೦೦
* ಛಂದಸ್ಸಾರ —ಮುಳಬಾಗಿಲ ೨.೦೦
* ಲೇಖನ ಕಲೆ —ಮಿರ್ಜಿ ಅಣ್ಣಾರಾಯ ೫.೦೦
* ಜೀವಂಧರ ಚರಿತೆ ಕಾವ್ಯಸಂಗ್ರಹ —ಭಾಸ್ಕರ ಕವಿ ೩.೫೦
* ರಸರತ್ನಾಕರಂ —ಕವಿಸಾಳ್ವ ೩.೫೦
* ಛಂದೋಂಬುಧಿ —ನಾಗವರ್ಮ ೨.೨೫
* ಚಾಲುಕ್ಯರ ಇತಿಹಾಸ —ಪ್ರೊ. ನಂಜುಂಡಸ್ವಾಮಿ ೨.೫೦
* ರಾಷ್ಟ್ರಕೂಟರ ಇತಿಹಾಸ " ೨.೦೦
* ಕದಂಬ ಗಂಗರ ಇತಿಹಾಸ " ೨.೫೦
* ಹೊಯ್ಸಳರ ಇತಿಹಾಸ " ೨.೦೦
* ನಮ್ಮ ಸಂಸ್ಕೃತಿ ಪರಂಪರೆ —ಬೇಟಗೇರಿ ಕೃಷ್ಣಶರ್ಮಾ ೨.೫೦
* ಕುಮಾರವ್ಯಾಸ ಭಾರತ ಎನ್ಕೆ ೧೫.೦೦
* ಕುಮಾರವ್ಯಾಸ ನಿಘಂಟು " ೩.೫೦
* ಮನುಸ್ಮೃತಿ —ಚ. ಈಶ್ವರ ಶಾಸ್ತ್ರಿ ೧೫.೦೦
* ಸುವ್ವೀ ಸುವ್ವೀ ಸುವ್ವಾಲೆ —ಡಾ. ಎಲ್. ಆರ್. ಹೆಗಡೆ ೩.೭೫
* ಕಾವ್ಯ ವ್ಯಾಸಂಗ " ೩.೦೦
* ಕನ್ನಡ ಗಾದೆಗಳ ಕೋಶ —ಸಂ. ಟಿ.ವಿ. ವೆಂಕಟರಮಣಯ್ಯ ೬.೦೦
* ಹಿರಿಯರ ಕಿರುಗತೆಗಳು " ೪.೦೦

**ಸಮಾಜ ಪುಸ್ತಕಾಲಯ, ಧಾರವಾಡ-೧**

ಪ್ರಾಕ್-ಸಾಹಿತ್ಯಮಾಲೆ: ೮

# ಚೂಡಾರತ್ನ ಶತಕ

ಸಂಪಾದಕರು :
ಡಿ. ಟಿ. ರಂಗಸ್ವಾಮಿ

ಸಮಾಜ ಪುಸ್ತಕಾಲಯ, ಧಾರವಾಡ

ಪ್ರಾಕ್-ಸಾಹಿತ್ಯ ಮಾಲೆ: ೮

# ಚೂಡಾರತ್ನ ಶತಕ

ಸಂಪಾದಕರು :
**ಡಿ. ಟಿ. ರಂಗಸ್ವಾಮಿ,**
ರೀಡರ್ ಮತ್ತು ಕನ್ನಡ ವಿಭಾಗದ ಮುಖ್ಯಸ್ಥರು,
ಸರಕಾರಿ ಕಾಲೇಜು, ಹಾಸನ



ಬರೆಯಿರಿ :
**ಪ್ರತಿಭಾ ಗ್ರಂಥಮಾಲೆ, ಧಾರವಾಡ.**

ಪ್ರಕಾಶಕರು :
ಪ್ರತಿಭಾ ಗ್ರಂಥಮಾಲೆ,
ಧಾರವಾಡ.

ಪ್ರಥಮ ಮುದ್ರಣ : ೧೯೬೩

ಬೆಲೆ : ರೂ. ೧-೫೦

ಮುದ್ರಕರು :
ಪ್ರತಿಭಾ ಮುದ್ರಣ,
ಧಾರವಾಡ.

## ಪ್ರಸ್ತಾವನೆ

"ಚೂಡಾರತ್ನ ಶತಕ"ವು ನೀತಿಪ್ರಬೋಧವಾದ ಒಂದು ಅಪೂರ್ವ ಶತಕವಾಗಿದೆ. ಇದನ್ನು ರಚಿಸಿದ ಕವಿಯ ಹೆಸರು, ಸ್ಥಳ, ಕಾಲ ಮೊದಲಾದ ಸಂಗತಿಗಳು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಜ್ಞಾನೇಶ್ವರ ಪಂಡಿತನಿಂದ ಪರಿಷ್ಕರಿಸಲ್ಪಟ್ಟದ್ದೆಂದು ಹಿಂದಿನ ಒಂದು ಪ್ರತಿಯಲ್ಲಿ ದೊರೆತ ಆಧಾರವೊಂದೇ ಕಿಂಚಿತ್ ಗೋಚರವಾಗಿರುವ ಅಂಶವಾಗಿದೆ. ಕವಿಚರಿತೆಕಾರರು ಹಿಂದೆ ಈ ಶತಕದ ಮೂರು ಪದ್ಯಗಳನ್ನು ಕವಿಚರಿತೆಯಲ್ಲಿ ಪ್ರಕಟಿಸಿದ್ದುದು ಅನೇಕರ ನಾಲಗೆಯ ಮೇಲೆ ಶಾಶ್ವತವಾಗಿ ಉಳಿದು ಬಂದು ಅವು ಜನಪ್ರಿಯವೂ ಎನಿಸಿವೆ. ಆದರೆ ಇಷ್ಟು ಸೊಗಸಾದ ಪದ್ಯಗಳಿರುವ ಈ ಶತಕವು ಇದುವರೆವಿಗೂ ಮುದ್ರಣಗೊಂಡಿರಲಿಲ್ಲ.

ಈ ಶತಕದ ಪ್ರಕಟಣೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಹ-ಸಂಪಾದಕರೂ, ನನ್ನ ಆತ್ಮೀಯರೂ ಆದ ಶ್ರೀ ಎಚ್. ಸಿ. ಶಾಂತವೀರಯ್ಯನವರ ನೆರವನ್ನು ಹೃತ್ಪೂರ್ವಕವಾಗಿ ಸ್ಮರಿಸುತ್ತೇನೆ. ಮತ್ತು ಅಂದವಾಗಿ ಮುದ್ರಣ ಮಾಡಿ ಪ್ರಕಟಿಸಿದ ಶ್ರೀ ಮನೋಹರ ಘಾಣೇಕರ್ ರವರಿಗೂ ವಂದನೆಗಳನ್ನು ಸಲ್ಲಿಸುತ್ತೇನೆ.

— ಡಿ. ಟಿ. ರಂಗಸ್ವಾಮಿ

## ಪ್ರಾಕ್–ಸಾಹಿತ್ಯಮಾಲೆಯ ಪ್ರಕಟಣೆಗಳು



| | | |
|---|---|---|
| ಶಬ್ದಸ್ಮೃತಿ | [ ನಾಗವರ್ಮ ] | ೨–೨೫ |
| ರಸರತ್ನಾಕರಂ | [ ಕವಿ ಸಾಳ್ವ ] | ೩–೫೦ |
| ಛಂದೋಂಬುಧಿ | [ ನಾಗವರ್ಮ ] | ೨–೨೫ |
| ಪಂಪಭಾರತಂ (ಆ. ೬–೭) | [ ಪಂಪ ] | ೪–೦೦ |
| ಚತುರಾಸ್ಯ ನಿಘಂಟು | [ ಚತುರಾಸ್ಯ ] | ೩–೦೦ |
| ಕವಿಕಂಠಹಾರ | [ ಸೂರ್ಯಕವಿ ] | ೪–೦೦ |
| ರತ್ನಾಕರ ಶತಕ | [ ರತ್ನಾಕರವರ್ಣಿ ] | ೩–೦೦ |
| ಚೂಡಾರತ್ನ ಶತಕ | | ೨–೦೦ |

**ಅಚ್ಚಿನಲ್ಲಿ**

ಪಂಪಭಾರತಂ (ಆ. ೧೩, ೧೪)
ಕರ್ನಾಟಕ ಶಬ್ದಸಾರ
ಅಪರಾಜಿತೇಶ್ವರ ಶತಕ

ಬರೆಯಿರಿ :

**ಸಮಾಜ ಪುಸ್ತಕಾಲಯ, ಶಿವಾಜಿಬೀದಿ, ಧಾರವಾಡ-೫೮೦೦೦೧**

## ಚೂಡಾರತ್ನ ಶತಕ



ಶ್ರೀಗುರುವಂ ನೆನೆಯಲ್ಕೆಡ
ರಾಗದು ಕಂಡಡೆ ಭವಂಗಳೋಡುವುವಲ್ಲನು
ರಾಗದಿ ಚರಣಾಶ್ರಯು ಕೊಂ
ಡಾಗಳಮಿಹಪರಕೆ ಸೌಖ್ಯ ಚೂಡಾರತ್ನಾ ॥ ೧ ॥

ಸುರನಾಕರ್ಷಣ ಮಂತ್ರಂ
ವರ ಮುಕ್ತ್ಯಂಗನೆಗೆ ತಾನೆ ಮೋಹನ ಮಂತ್ರಂ
ದುರಿತೋಚ್ಚಾಟನ ಮಂತ್ರಂ
ಗುರುನಾಮದ ಮಹಿಮೆಯಲ್ತೆ ಚೂಡಾರತ್ನಾ ॥ ೨ ॥

ನೀತಿಗಳು ಸಕಲ ಶಾಸ್ತ್ರ
ಖ್ಯಾತಿಗಳಱಿವುಳ್ಳ ರಸಿಕ ಬುಧಜನಮನ ಸಂ
ಪ್ರೀತಿಗಳು ದುಃಖ ತಿಮಿರ
ಜ್ಯೋತಿಗಳೆಂದೆನಿಸುತಿಹವು ಚೂಡಾರತ್ನಾ ॥ ೩ ॥

ನೀತಿಯಲಿ ನಡೆಯಬಲ್ಲಡೆ
ಮಾತಂ ಪರಹಿತವ ನುಡಿಯ ಬಲ್ಲಡೆ ಸಜ್ಜನ
ಪ್ರೀತಿಯನು ಮಾಡಬಲ್ಲಡೆ
ಯಾತಂಗರಿದುಂಟೆ ಕೇಳು ಚೂಡಾರತ್ನಾ ॥ ೪ ॥

ಮಕ್ಕಳಿಗೆ ತಂದೆ ಬಾಲ್ಯದೊ
ಳಕ್ಕರ ವಿದ್ಯೆಗಳನಱಿಪದಿರ್ದೊಡೆ ಕೊಂದಂ
ಲಕ್ಕ ಧನಮಿರಲು ಕೆಡುಗುಂ
ಚಿಕ್ಕಂದಿನ ವಿದ್ಯೆ ಪೊರೆಗು ಚೂಡಾರತ್ನಾ ॥ ೫ ॥

ಬರೆಯದ ಕೈ ಬಂಧುಗಳಂ
ಪೊರೆಯದ ಕೈ ಸುತರನೆತ್ತಿಕೊಂಡಾಡದ ಕೈ
ಕರೆದು ಬುಧರ್ಗೀಯದ ಕೈ
ಮರಗೈ ಮರುಳ್ಗೈಗಳಂತೆ ಚೂಡಾರತ್ನಾ ॥ ೬ ॥

ಓದದ ಬಾಯ್ ಅನ್ಯತಾನ್ನವ
ನೋದದ ಬಾಯ್ ಸಜ್ಜನರ್ಕಳಂ ಪ್ರಿಯದಿಂದಂ
ಆದರಿಸದ ಬಾಯದು ತಾಂ
ಮೇದಿನಿಯೊಳು ಬಿಲದ ಬಾಯಿ ಚೂಡಾರತ್ನಾ ॥ ೭ ॥



ವಿದ್ಯೆಯೆ ಮಾತಾಪಿತರುಂ
ಬುದ್ಧಿಯೆ ಸೋದರರು ವಿನಯ ವಚನಮೆ ನಂಟಂ
ಅಧ್ವಾನ ಹಿಂಗಿ ಸುಖದಿಂ
ದಿದ್ದುದೆ ತನ್ನೂರು ಕೇಳು ಚೂಡಾರತ್ನಾ ॥ ೮ ॥

ಓದಿನೊಳಲ್ಲದೆಯಿಹಪರ
ಸಾಧನ ಸಂಪತ್ತುಮಾಗದದು ಕಾರಣದಿಂ
ಓದುವುದು ಸಕಲ ಶ್ರುತಮುಂ
ಭೇದಿಸಲಳವಪ್ಪುದಲ್ತೆ ಚೂಡಾರತ್ನಾ ॥ ೯ ॥

ಸ್ತ್ರೀಯರನೊಲಿಸುವೊಡಂ ಕವಿ
ನಾಯಕನೆನಿಸುವೊಡೆ ತನ್ನ ಕೃತಿ ಚಂದ್ರಾರ್ಕ
ಸ್ಥಾಯಿಯೆನಿಸುವೊಡೆ ಬಲ್ಲರ
ಬಾಯಿಂ ಪೊಕ್ಕೋದಿ ಕಲಿಗೆ ಚೂಡಾರತ್ನಾ ॥ ೧೦ ॥

ತಪ್ಪುತ್ತೆಡಹುತ್ತೋದು
ತ್ತಿಪ್ಪನ ಬಾಯ್ ಶತ್ತೆವಾಯಿ ಕಾನನವಾಯ್ತಾಂ
ಕಪ್ಪುರ ಕರಡಗೆ ಬಾಯುಂ
ತಪ್ಪದೆಯೋದುವನ ಬಾಯಿ ಚೂಡಾರತ್ನಾ ॥ ೧೧ ॥

ಉಕ್ಕದೆ ಬಿಕ್ಕದೆ ಲಿಪಿಯುಂ ನಕ್ಕದೆ
ತಡವರಿಸದೆಡಹದೆ ಪದವಿ
ಟ್ಟಕ್ಕರ ಬಣಿತೆಯೊಳೋದುವು
ದಕ್ಕರಿಗರ ಮಾರ್ಗವಲ್ತೆ ಚೂಡಾರತ್ನಾ ॥ ೧೨ ॥

ಅಕ್ಕದ ಹೊರಗೆ ಛಂದಸು
ತರ್ಕಂ ವ್ಯಾಕರಣದಜಿವನಜಿತೋದದ ಬಾಯ್
ಲೆಕ್ಕಕ್ಕೋದುವನೋದುಂ
ಸೊಕ್ಕಿದ ನರಿಯಾಡುವಂತೆ ಚೂಡಾರತ್ನಾ ॥ ೧೩ ॥

ಎಡರದೆ ತಡೆಯದೆ ತಲೆಯುಂ
ಕೊಡಹದೆ ಕಡುವಹಿಲಜಾಡ್ಯವೆನಿಸದೆ ರಸಮುಂ
ಕೆಡಿಸದೆ ಸರ್ವರ ಚಿತ್ತ
ಕ್ಕೊಡಬಡಲೋದುವನೆ ಗಮಕಿ ಚೂಡಾರತ್ನಾ ॥ ೧೪ ॥

ವಕ್ಕಲಿಗನೋದು ಹೆಳವನ
ವಿಕ್ರಮ ಮುಂಬೆಂಡ ಸೀರೆ ಸಲ್ಲದ ಧರ್ಮಂ
ಪಕ್ಕಲೆಯ ನೀರು ಮನಕಂ
ಕೊಕ್ಕರಿಕೆಯ ತಾರದಿಹುದೆ ಚೂಡಾರತ್ನಾ ॥ ೧೫ ॥



ಜಾತಿಯನುಸುರ್ವನೆ ಕವಿ ರಸ
ರೀತಿಯಲೋದುವನೆ ಗಮಕಿ ಪರರೆಂದುದನುಂ
ಘಾತಿಪನೆ ವಾದಿ ವಾಕ್ ನೆರೆ
ವಾತಂ ವಾಗ್ಮಿಕನು ಧರೆಗೆ ಚೂಡಾರತ್ನಾ ॥ ೧೬ ॥

ಮುದ್ದಳೆಯ ಗತಿಗೆ ಜಘನಗ
ಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ
ಪದ್ಯ ಪದ ಕಾವ್ಯದರ್ಥವ
ದೊದ್ದಗರೇಂ ಬಲ್ಲರೆಂದ ಚೂಡಾರತ್ನಾ ॥ ೧೭ ॥

ನಾರಿಯ ಮನಮುಂ ಕವಿತಾ
ಸಾರತೆಯುಂ ದಿವ್ಯ ತಪಸಿಯುಂ ಸಜ್ಜನರಂ
ಭಾರಿಯ ಜಾಣರು ಬಲ್ಲರು
ಊರುಗರೇಂ ಬಲ್ಲರೆಂದ ಚೂಡಾರತ್ನಾ ॥ ೧೮ ॥

ಅರಿಯದರ ಮುಂದೆ ಕಳೆಗಳು
ಮೆರೆವವೆ ನಿಷ್ಕಳೆಗಳಹವು ಅಲ್ಲದೆ ನಸು ಮಾ
ತರಿಯದ ಬಾಲಕಿಯೊಳ್ವಿಟ
ನರಿತವದೇನುರಿವುದೆಂದ ಚೂಡಾರತ್ನಾ ॥ ೧೯ ॥

ಬಲ್ಲಿದರುಳ್ಳೊಡೆ ವಿದ್ಯೆಗ
ಳೆಲ್ಲಂ ಪಲ್ಲವಿಸುತಿರ್ಕುವೆಂತೆನೆ ಪೇಳ್ವೆಂ
ಸಲ್ಲಲಿತ ಸೌಖ್ಯಲತೆಯುಂ
ಪಲ್ಲವಿಸುವ ತೆರದಿಂದಲೆ ಚೂಡಾರತ್ನಾ ॥ ೨೦ ॥

ಇಲ್ಲದ ವಿದ್ಯೆಯ ಗರ್ವಂ
ಬಲ್ಲಿದರೊಳು ಸೆಣಸಿ ಹಿಂಗಿ ಕಂದುವ ಭಂಗಂ
ಅಲ್ಲದ ಸತಿಯೊಡನಾಟಂ
ಕೊಲ್ಲದೆ ಮಾಣ್ದಪುದು ಕೇಳು ಚೂಡಾರತ್ನಾ ॥ ೨೧ ॥

ಗೀತದ ಗೋಷ್ಠಿಯ ಮೇಳದ
ಮಾತಿನ ಸಂಭ್ರಮದ ಬಿನದದೋಲಗವಬಲಾ
ವ್ರಾತದೊಳು ಸಂದಡಾತಂ
ಆತನೆ ಬದಿ ವಿಷ್ಣು ಜಿಷ್ಣು ಚೂಡಾರತ್ನಾ ॥ ೨೨ ॥

ಅರಿವೆಡೆಯೊಳುರಿವನುರಿವಂ
ಅರಿಯದ ಕಾವಿಂಗೆ ಹೊಡೆದು ನೂಕುವರೆ ವಲಂ
ಕಿರುಗೂಸಾಗಿರೆ ಕೃಷ್ಣನ
ಕರುಗಾಯಿಸರೇ ಪಳ್ಳಿಯವರು ಚೂಡಾರತ್ನಾ ॥ ೨೩ ॥



ಕಿಱಿದಾದ ವಿದ್ಯೆಯಾಗಲಿ
ಮೆಱೆವುದು ತನ್ನಲ್ಲಿ ಗುಣಗಳುಳ್ಳೊಡೆ ಮತ್ತಾ
ಒಱೆತೆಯ ನೀರಾದೊಡೆ ತಾಂ
ಬಱನಂ ಪಿಂಗಿಸದೆ ನೋಡು ಚೂಡಾರತ್ನಾ ॥ ೨೪ ॥

ಕೊಲ್ವುದು ಧರ್ಮವೆ ಪರವಧು
ಗೊಲ್ವುದದೇ ಸೊಬಗೆ ಪಾಪಹೇತುಂಗಳೊಂದಂ
ಕಳ್ವುದು ನೀತಿಯನುಜರ
ಗೆಲ್ವುದದೇಂ ಚದುರೆ ಕೇಳು ಚೂಡಾರತ್ನಾ ॥ ೨೫ ॥

ಸಂಗೀತದ ಸಾಹಿತ್ಯದ
ಅಂಗನೆಯರನಂಗ ಸುಖವನರಿಯದ ಮನುಜಂಗೆ
ಭಂಗವು ಬೇರಿಲ್ಲ ಅವರವ
ರಂಗವನರಿಯದುದೆ ಭಂಗ ಚೂಡಾರತ್ನಾ ॥ ೨೬ ॥

ತಮತಮಗೆ ಬುದ್ಧಿವಂತರು
ತಮತಮಗೆಯು ವಿದ್ಯದಲ್ಲಿಯಧಿಕರು ಚೆಲುವರು
ತಮತಮಗೆ ಗುಣಿಗಳಲ್ಲದೆ
ತಮತಮಗವಗುಣಗಳುಂಟೆ ಚೂಡಾರತ್ನಾ ॥ ೨೭ ॥

ಆವುದು ಸಮಯೋಚಿತವದು
ಭಾವಂ ಬೆರಸಿರ್ದ ಹೃದಯದನುವರಿದಳವರಿ
ದಾವವ ನುಡಿವವನವನಂ
ದೇವರೆನಲ್ತಿರದೆ ನೋಡು ಚೂಡಾರತ್ನಾ ॥ ೧೮ ॥

ಚಂದನ ಹಿಮ ಪನ್ನೀರಿಂ
ಚಂದಿರ ಕಿರಣಂ ವಿಶೇಷ ಶೈತ್ಯಂ ಮತ್ತಾ
ಚಂದನ ಹಿಮ ಪನ್ನೀರ್ ಶಶಿ
ಯಿಂದಂ ಮೃದುವಚನ ಶೈತ್ಯ ಚೂಡಾರತ್ನಾ ॥ ೧೯ ॥

ಓರಂತಿದಿರಿನ ಹೃದಯುದ
ಸಾರಾಸಾರತೆಯನಱಿದು ನುಡಿವಂಗಿಳೆಯೊಳು
ಕೂರದರಾರ್ ಮೆಚ್ಚದರಾರ್
ಆರಾಧಿಸದಿರ್ಪರಾರು ಚೂಡಾರತ್ನಾ ॥ ೨೦ ॥

ಸಾರಾಸಾರ ವಿವೇಕ ವಿ
ಚಾರವನರಿಯುದರ ಕೂಡೆ ಸುಜನರು ನುಡಿಯ
ಲ್ಕಾರಯ್ಯದೆ ಹೊನ್ನಂಬಂ
ನೀರೊಳಗೆಚ್ಚಂತೆ ನೋಡು ಚೂಡಾರತ್ನಾ ॥ ೨೧ ॥



ಆಡಿದ ಜಾಣ್ನುಡಿಯಂ ಕೊಂ
ಡಾಡಿ ಕರಂ ಮೆಚ್ಚ ಬಲ್ಲ ಸಜ್ಜನರೊಳು ಮಾ
ತಾಡುವುದಲ್ಲದೆ ಪುರುಷಂ
ಮೂಢರೊಳಾಡುವರೆ ಕೇಳು ಚೂಡಾರತ್ನಾ ॥ ೨೨ ॥

ರಾಗರಸ ಮಿಗಿಲು ಸಭೆ ತಲ್ಕೆ
ದೂಗಲು ತಾಂ ನುಡಿಯು ಬಲ್ಲೊಡದು ನುಡಿಯೆನಿಸೊಂ
ದಾಗದಿರೆ ಸೈತು ಮಾಗಿಯ
ಕೋಗಿಲೆಯಂತಿಹುದು ನೋಡು ಚೂಡಾರತ್ನಾ ॥ ೨೩ ॥

ಆರಾರುಂ ರಕ್ಷಿಪರಿಂ
ಆರಾರುಂ ಕಾಯ್ವಕೊಲ್ವರೆಂಬುದು ಪುಸಿ ಮುಂ
ನ್ನಾರಾಧಿಸಿ ಪಡೆದುದನಿ
ನ್ನಾರಾರುಂ ಕಳೆಯಬಹುದೆ ಚೂಡಾರತ್ನಾ ॥ ೨೪ ॥

ಹಡದೊಡವೆ ಹೋದ ಬಳಿಕಂ
ಉಡದೋದೆನು ವುಣ್ಣದೋದೆನಾರ್ಗೊಂದೆಡರಿಗೆ
ಕೊಡದೋದೆನೆಂದು ಮರುಗುವ
ಜಡಮತಿಗಳ ಕೇಡ ನೋಡು ಚೂಡಾರತ್ನಾ ॥ ೨೫ ॥

ಸತ್ಯದಲಿ ಸಹಜ ಧರ್ಮದ
ಲುತ್ತ ವ್ಯವಸಾಯದಿಂದ ಲೇಸಿಂ ದಯದಿಂ
ಪೆತ್ತ ಧನಂ ಗುರುಹಿರಿಯರಿ
ಗಿತ್ತ ಧನಂ ತನ್ನ ಧನವು ಚೂಡಾರತ್ನಾ ॥ ೩೬ ॥

ಕುಲವಾವುದು ಸುಚರಿತ್ರಂ
ಚೆಲುವಾವುದು ಸಕಲ ಕಲೆಯನರಿವುದು ಯೋಗದ
ನೆಲೆ ಯಾವುದು ಕ್ಷಮೆ ಜೀವಕೆ
ಫಲವಾವುದು ಪರಹಿತಾರ್ಥ ಚೂಡಾರತ್ನಾ ॥ ೩೭ ॥

ಎಲ್ಲಿ ಸುಶೀಲಂ ಸದ್ಗುಣ
ಮೆಲ್ಲಿ ದಯೆ ಧರ್ಮವೆಸೆವ ಸತ್ಯಂ ನೆಲೆಗೊಂ
ಡಲ್ಲಿಯೆ ಆಯುಂ ಸಿರಿಯುಂ
ಸಲ್ಲೀಲೆಯೊಳಿಪ್ಪುವಲ್ತೆ ಚೂಡಾರತ್ನಾ ॥ ೩೮ ॥

ಆಗುಂಬುದಾಗಲುಡುವುದು
ಆಗಳೆ ಕರೆದೀವುದುಚಿತವಾಗಳಿಗಾಗಂ
ಬೇಗ ಬೇಗೆಂಬ ಜವನೊಳ
ಗಾಗನು ಮುನ್ನರಿವ ಜಾಣ ಚೂಡಾರತ್ನಾ ॥ ೩೯ ॥



ಉಂಬುದುಮುಡುವುದು ಮಿಕ್ಕುದ
ನಿಂಬಿಡುವುದು ಧರ್ಮದೆಡೆಯೊಳುತ್ತಮ ಪುರುಷಂ
ನಂಬು ಮುನಿಯಲ್ಕೆ ಪೋಗದು
ಬೆಂಬಳಿಯಲಾತನೆ ಬಹುದು ಚೂಡಾರತ್ನಾ ॥ ೪೦ ॥

ತಾನುಂಬುದು ಪೆರರ್ಗೀವುದು
ಮಾನಿನಿಯನೊಲಿಸಿ ಸುಖದೊಳಿರ್ಪುದು ಮನುಜಂ
ದೀನತೆಯಂ ಬಿಡು ಬಿಡು ಸಿರಿ
ಮಾನವರಿಗೆ ನೆಲೆಯದಲ್ಲ ಚೂಡಾರತ್ನಾ ॥ ೪೧ ॥

ಸುಳಿಗಡಲೊಳಗುದಿಸಿದ ಸಿರಿ
ಸುಳಿಸುಳಿದಾಡುವಳು ನಿಲ್ಲಳೆಲ್ಲಿಯುಮುತ್ತಾ
ಸುಳಿಯುಳ್ಳಲ್ಲಿಯೆ ಕೂಡದಿರೆ
ಸುಳಿಯೊಳು ತನ್ನತ್ತ ಲಕ್ಷ್ಮಿ ಚೂಡಾರತ್ನಾ ॥ ೪೨ ॥

ಸಿರಿತನವೊಲಿದಲ್ಲಿಯೆ ಕರೆ
ಕರೆದೀವುದು ಬಂಧುಜನಕವಾಶ್ರಿತಜನಕಂ
ಕರೆದೀಯದಿರ್ದೆಯಾದೊಡೆ
ಸಿರಿ ಸಂಧ್ಯೆಯ ನೆರವಿಯಂತೆ ಚೂಡಾರತ್ನಾ ॥ ೪೩ ॥

ಸಿರಿಯೊಳು ದಾನಂ ವಿದ್ಯಾ
ಪರಿಣತಿಯೊಳ್ವಿನಯಮಧಿಕ ಪದದೊಳು ಪರಹಿತ
ಪುರುಷಂಗಿಂತಿವು ಸರ್ವಾ
ಭರಣಂಗಳ್ ಬೇರೆ ತೊಡವೆ ಚೂಡಾರತ್ನಾ || ೪೪ ||

ತಕ್ಕುಚಿತಂಗಳ ಮಾಡದ
ಬಿಕ್ಕಿದರಿಗೆ ನೀರೆರೆಯದ ಪಸಿದರ್ಗನ್ನವ
ನಿಕ್ಕದ ಲೋಭಿಯ ಧನವಾ
ಮೆಕ್ಕೆಯ ಹಣ್ಣಂತೆ ನೋಡು ಚೂಡಾರತ್ನಾ || ೪೫ ||

ತ್ಯಾಗಿಗೆ ಧನ ತೃಣ ಪರತರ
ಯೋಗಿಗೆ ತೃಣವೀ ಜಗತ್ತು ಕಲಿಗಂ ಸಮರೋ
ದ್ಯೋಗಂ ತೃಣ ಮಾತರಿಯದ
ಹಗೆಗೆ ತೃಣ ನೀತಿಶಾಸ್ತ್ರ ಚೂಡಾರತ್ನಾ || ೪೬ ||

ಸುರತರುವದಾವುದೀವನ
ಕರತಳಮರೇಂದ್ರವಾಸವಾವುದು ಪುಣ್ಯಾ
ತ್ಮರ ಸಂಗಮಮರನಾವಂ
ಪರಹಿತ ಚರಿತಂ ವಿವೇಕ ಚೂಡಾರತ್ನಾ || ೪೭ ||



ತನಗುಪಭೋಗಿಸಲುಂ ಸ
ಜ್ಜನರ್ಗೀಯಲುಮಿಲ್ಲದೊಡವೆಗೊಡೆಯಂ ಗಡಕಾಂ
ಚನಗಿರಿಯು ತನ್ನ ಪಿತೃಗಳ
ಧನವೆಂಬಾ ಮರುಳನಂತೆ ಚೂಡಾರತ್ನಾ || ೪೮ ||

ಕೊಟ್ಟರಿಯನಿದಿರ್ಗೆ ತಾನುಂ
ಪುಟ್ಟಲೀಯಂ ಧರ್ಮವರಿಯನವನೀ ಬುವಿಯೊಳ್
ಪುಟ್ಟಿದೊಡೇಂ ಸತ್ತೊಡದೇಂ
ಪುಟ್ಟದೆ ತಾಂ ಮಾಣ್ದೊಡೇನು ಚೂಡಾರತ್ನಾ || ೪೯ ||

ದೀನರು ದಯಹೀನರು ಗುಣ
ಹೀನರುಗಳು ಲಕ್ಷಸಂಖ್ಯೆಯಿದ್ದೇಂ ಬಂದೇಂ
ದಾನಿ ಜಗದೊಳಗೆ ಸಂತತ
ಭಾನುವಿನಂತೊಬ್ಬನಿಹನು ಚೂಡಾರತ್ನಾ || ೫೦ ||

ಕರೆಕರೆದು ಬಿಡಲು ಪಶುವು
ತೊರೆವುದು ಕೆಚ್ಚಲಲ್ಲಿ ಹಾಲು ಬಳಿಕದ ತಿಳಿದುಂ
ತೊರೆವುದು ಸಿರಿ ಮರೆಯದೆ ಕೊಡು
ಕರೆವಾಕಳ ನೋಡಿ ನಂಬು ಚೂಡಾರತ್ನಾ || ೫೦ ||

ಆರಿತ್ತು ಬಡವರಾದರು
ಆರೀಯೆ ಧನಿಕರಾಗಿ ಜಗದೊಳಗೆ ಬಾಳ್ದರು
ಊರುಂಬ ಕೆರೆಯುಮಡವಿಯ
ನೀರುಂ ಕಾಲಕ್ಕೆ ಸರಿಯೆ ಚೂಡಾರತ್ನಾ ॥ ೫೧ ॥

ಶ್ರೀಗೆ ನೆಲೆಯಾವುದಧಿಕೋ
ದ್ಯೋಗಂ ಧರ್ಮಕ್ಕೆ ನೆಲೆಯಾವುದು ಸತ್ಯಂ
ತ್ಯಾಗಕ್ಕೆ ನೆಲೆಯಾವುದು ದಯೆ
ಬೇಗದೊಳೀವುದು ವಿವೇಕ ಚೂಡಾರತ್ನಾ ॥ ೫೨ ॥

ವಿನಯದೊಳಿತ್ತಾ ದಾನಂ
ಕನಕಾದ್ರಿಗೆ ತತ್ಸಮಾನ ಕನಲುತ ಮುನಿಯುತ
ಜಿನುಗುತ್ತಿತ್ತಾ ದಾನಂ
ಮೊನೆಯಿಲ್ಲದ ಘಾಯದಂತೆ ಚೂಡಾರತ್ನಾ ॥ ೫೩ ॥

ಇರಿಯದ ಭಟನೀಯದ ನೃಪ
ಓಡದ ಹಯನೊಲಿಸದಬಲೆ ಓದದ ಪಾರ್ವಂ
ತೆರೆದೊಕ್ಕಲು ಬೆಳೆಯದ ಹೊಲ
ನರಿವರೆ ಧರಣಿಯೊಳು ಸತತ ಚೂಡಾರತ್ನಾ ॥ ೫೪ ॥



ಕನಕಂ ಪುಣ್ಯದಿ ಸಾರ್ದೊಡೆ
ಘನಮುನಿ ಸಜ್ಜನರಿಗಿತ್ತು ಭೋಗಿಸೆ ಸಫಲಂ
ತನಗಿಲ್ಲ ದಾನಕಿಲ್ಲದ
ಮನುಜನ ಸಿರಿ ಕನಸಿನಂತೆ ಚೂಡಾರತ್ನಾ ॥ ೫೫ ॥

ವಿತರಣೆಯಿಲ್ಲದೆ ತನ್ನಾ
ಶ್ರಿತರಂ ಪಾಲಿಸದ ವಿನಯಪರನಲ್ಲದವಂ
ಸ್ತುತಿಸುವಡವನೇಂ ಕುಲದೇ
ವತೆಯೇ ಧಾರಿಣಿಗೆ ನೋಡು ಚೂಡಾರತ್ನಾ ॥ ೫೬ ॥

ಆವಾವ ತೆರದ ಜೀವದ
ನೋವೆಲ್ಲಂ ತನ್ನ ನೋವದೆಂಬಾ ಮನುಜಗೆ
ಆವುದು ಜಪವಾವುದು ತಪ
ವಾವುದು ದೇವಾರ್ಚನೆಗಳ್ ಚೂಡಾರತ್ನಾ ॥ ೫೭ ॥

ವಿತ್ತಾನುಂ ಸತ್ಪುರುಷ
ರ್ಗಿತ್ತೊಡೆ ಫಲ ತಪ್ಪದಕ್ಕುದೆಂತೆನೆ ತೆಂಗಂ
ಬಿತ್ತಿಯೆ ನೀರೆರೆಯಮೃತವ
ಹೊತ್ತಿರದೇ ನೆತ್ತಿಯಲ್ಲಿ ಚೂಡಾರತ್ನಾ ॥ ೫೮ ॥

ಉಟ್ಟೊಡೆ ಮಾಸುಗು ಕಪ್ಪಡ
ತೊಟ್ಟೊಡೆ ತಾಂ ಸವೆವುದಖಿಳ ಹೇಮಾಭರಣಂ
ನೆಟ್ಟನೆ ತನುವಳಿವುದು ಮೇಣ್
ಕೊಟ್ಟುವನೊಡಲೊಡಮೆ ಕೆಡದು ಚೂಡಾರತ್ನಾ ॥೫೯॥

ವಿನಯ ವಿರಹಿತನ ತಪಮುಂ
ಧನಮುಂ ಸತ್ಪಾತ್ರವರಿದು ಕೊಡದನ ಸಿರಿಯುಂ
ಮನವರಿದೊಲಿಸದ ಸತಿಯುಂ
ತೆನೆಯಾಗದ ಶಾಲಿಯುಂತೆ ಚೂಡಾರತ್ನಾ ॥ ೬೦ ॥

ಕರ್ಮವ ಕೆಡಿಪನೆ ಗುರು ಸ
ತ್ಕರ್ಮದಿ ನಡೆದವನೆ ಮಾರ್ಗಿ ಕಾಲೋಚಿತ ದಯು
ಧರ್ಮವ ಪಡೆವನೆ ಹಿರಿಯುಂ
ಮರ್ಮವನರಿವನೇ ಸುಮಿತ್ರ ಚೂಡಾರತ್ನಾ ॥ ೬೧ ॥

ಕೊಲಲಾಗದು ಧರ್ಮಿಗಳಂ
ಗೆಲಲಾಗದು ನಂಬಿದವರ ಸತ್ಯಕೆ ಮಿಥ್ಯಾ
ಛಲ ಬೇಡ ಹಿರಿಯರೆಡೆಯೊಳು
ಬಲುಹಾಗದು ಬಂಧುಗಳೊಳು ಚೂಡಾರತ್ನಾ ॥ ೬೨ ॥



ತುಚ್ಛಗೆ ನೀಚಗೆ ಧನವತಿ
ಹೆಚ್ಚಿದೊಡೇನಾತ್ಮಭೋಗ ಪರಹಿತಕಿಲ್ಲಂ
ಬಚ್ಚಲ ನೀರ್ ಕದಡಿದೊಡೇಂ
ನಿಚ್ಚಳದಿಂ ತಿಳಿದೊಡೇನು ಚೂಡಾರತ್ನಾ ॥ ೬೩ ॥

ಹಂದಿ ಹದಿನೈದು ನೀಡುಂ
ಒಂದು ಹಯನಲ್ಲದೆಂದು ಲೋಭಿಯ ಧನವುಂ
ಸಂದಿರದು ದಾನ ಧರ್ಮಕೆ
ವಿಂಧ್ಯದ ಬೊಬ್ಬುಲಿಯ ತೆರದಿ ಚೂಡಾರತ್ನಾ ॥ ೬೪ ॥

ಅಸಮಯವಿದು ಸಮಯವಿದೆಂ
ಬೆಸಕವು ದಾನಿಗಳಿಗುಂಟೆ ಕರ್ಣಂ ರಣದೊಳು
ಬಸವಳಿವುತಿರ್ದೀಯನೆ
ಬಿಸರುಹನೇತ್ರಂಗಂದು ಚೂಡಾರತ್ನಾ ॥ ೬೫ ॥

ಆನೆ ಹಸಿದೆಳೆಯ ನೊಳೆಯಂ
ತಾನಳುಪಿಂ ಮೇಯಲದರ ಹಸು ಪೋದಪುದೇ
ಹೀನರನಾಶ್ರಯಿಸಿದೊಡಪ
ಮಾನದ ಕೇಡು ಅರ್ಥಹಾನಿ ಚೂಡಾರತ್ನಾ ॥ ೬೬ ॥

ಪುಲಿದೊವಲುಂ ಫಣಿಶಿರದೊಳ್
ನೆಲಸಿದ ಮಾಣಿಕ್ಯವಧಿಕ ಲೋಭಿಯ ಧನವುಂ
ತ್ವರಿತಗತಿಯಿಂದ ಬಾರವು
ಕೊಲಲಾರ್ಪಂಗಲ್ಲದಿಲ್ಲ ಚೂಡಾರತ್ನಾ ॥ ೬೭ ॥

ತೇಜಸ್ವಿಯ ಧರ್ಮಜ್ಞನ
ರಾಜಸಮೀಪಸ್ಥನಪ್ಪನಂ ದುರ್ಜನನಂ
ಓಜೆಯೊಳುಪಾಯ ಮಳ್ಳರ
ನೀಜಗದೊಳು ಸೆಣಸಬೇಡ ಚೂಡಾರತ್ನಾ ॥ ೬೮ ॥

ಸಿರಿ–ಬಡತನ ಸುಖ–ದುಃಖಂ
ಪರಿಣಾಮಂ ಶೋಕ–ಮೋಹ ಜನನಂ–ಮರಣಂ
ಕರುಣವು ಮನ್ನಣೆಯೆಂಬಿವು
ಸರಿಸರಿ ನರರಿಂಗೆ ಸುಕವಿ ಚೂಡಾರತ್ನಾ ॥ ೬೯ ॥

ದುರಿತಾತ್ಮರ ಕಿವಿಗೆ ಮಹಾ
ಪುರುಷರ ನುಡಿ ವಿಷಮವಾಗಿ ತೋರ್ಕುಂ ನಿರ್ಭಾ
ಗ್ಯರ ಕಣ್ಗೆ ನಿಧಿಯೆ ತಾ ಬಿಡ
ದುರಿಯಾಗಿಯೆ ತೋರುವಂತೆ ಚೂಡಾರತ್ನಾ ॥ ೭೦ ॥



ಅತಿವ್ಯಸನದಿಂ ದಶಶಿರ
ನತಿ ಚಾಗದಿನತನೂಜನತಿ ಲೋಭತೆಯಿಂ
ಧೃತರಾಷ್ಟ್ರಸೂನು ಕೆಟ್ಟರು
ಅತಿರೇಕದಿಂ ಕೆಡದರಾರು ಚೂಡಾರತ್ನಾ ॥ ೭೧ ॥

ಕನಕದ ಸಿಂಹಾಸನದೊಳು
ಶುನಕನ ಕುಳ್ಳಿರಿಸಿ ಸೇಸೆದಳಿಯಲು ಮತ್ತಂ
ತನು ಕೆರಳಿ ಬಗುಳ್ವುದಲ್ಲದೆ
ಘನತೆಯದಕುಂಟೆ ವಿವೇಕ ಚೂಡಾರತ್ನಾ ॥ ೭೨ ॥

ಆರಾರುಂ ರಕ್ಷಿಪರಿ
ನ್ನಾರಾರುಂ ಕಾಯ್ದು ಕೊಲ್ವರೆಂಬುದು ಪುಸಿ ಮು
ನ್ನಾರಾಧಿಸಿ ಪಡೆದುದನಿ
ನ್ನಾರಾರುಂ ಕಳೆಯಬಹುದೆ ಚೂಡಾರತ್ನಾ ॥ ೭೩ ॥

ನಡುಗಡಲ ಜಲವ ಹೊಕ್ಕರೆ
ಮಡನೆನೆಯದು ತನ್ನ ಮುನ್ನ ಮಾಡಿದ ಸುಕೃತಂ
ಎಡೆಯಲ್ಲರಸಿದರುಂಟೇ
ಮೃಡ ಬರೆದುದ ತೊರೆಯಬಹುದೆ ಚೂಡಾರತ್ನಾ ॥ ೭೪ ॥

ಕಲ್ಪಿತವ ಮೀರಬಾರದು
ತಪ್ಪದು ಕೇಳ್ ನೆಲನ ಬಿಗಿದು ಹೊಕ್ಕೊಡೆ ಮತ್ತಾ
ಬಪ್ಪುದು ತಪ್ಪದು ಹಣೆಯಲಿ
ತಪ್ಪಂ ಬರೆದನೆ ವಿಧಾತೃ ಚೂಡಾರತ್ನಾ ॥ ೭೫ ॥

ಅಳಲುಂ ನೋವುಂ ಕೇಡುಂ
ಘಳಿಲನೆ ತನಗಡಸಿದಲ್ಲಿ ಅರಿವಿನ ಮರೆವೊ
ಕ್ಕುಳಿದನೆ ಚದುರಂ ಮತ್ತಾ
ತಿಳಿವಿನ್ನಾವೆಡೆಗೆ ಸುಕವಿ ಚೂಡಾರತ್ನಾ ॥ ೭೬ ॥

ಹಿಂದಂ ನೆನೆದವನೇ ಸುಖಿ
ಮುಂದಂ ನೆನೆವವನೆ ದುಃಖಿಯಿಂತೆರಡರೊಳಂ
ಬಂದುದನನುಭವಿಪನೇ ಬುಧ
ನೆಂದುಂ ಸಾಯದನೆ ದೇವ ಚೂಡಾರತ್ನಾ ॥ ೭೭ ॥

ಚಿಂತಿಪನೆ ನರಕಿ ಸಲೆ ನಿ
ಶ್ಚಿಂತನೆ ಸುಖಿ ಕೋಪಮುಳ್ಳೊಡಾತನೆ ಪಾಪಿಯು
ಸಂತೋಷಿಯೆ ಸಿರಿವಂತಂ
ಭ್ರಾಂತಳಿದನೆ ಪರಮಯೋಗಿ ಚೂಡಾರತ್ನಾ ॥ ೭೮ ॥



ಯಮುನಾರ ನೆಂಟ ತನ್ನಯ
ಸಮಸುತನೆಂದೆನಿಪ ಧರ್ಮರಾಯನವೊಯ್ದಂ
ಭ್ರಮೆ ಬೇಡ ಬೇಡ ಮಾನವ
ನಿಮಿಷದಿ ಧರ್ಮವನೆ ಮಾಡು ಚೂಡಾರತ್ನಾ ॥ ೭೯ ॥

ಸಾವಿನ ಬಾಧೆಗೆ ಸಿಲುಕದ
ನಾವಂ ದಿಕ್ಪಾಲರನಾಳುಗೆಲಸಂಬೊಗಿಸಿದ
ರಾವಣನನೊಯ್ದನೆ ಮುನು
ಜಾವಳಿಗಂಜುವನೆ ಯಮನು ಚೂಡಾರತ್ನಾ ॥ ೮೦ ॥

ಆಳುಂ ಪೆಂಡಿರು ಸುತರುಂ
ಮೇಳದವರ್ ನೆಂಟರಿಷ್ಟರೊಡಕಾಳ್ದೊಡರುಂ
ಕಾಲಾಳ್ಗಳು ರಥಾಶ್ವಂ
ಕೇಳಳಿಪವೆ ಜವನ ಮುಳಿಸ ಚೂಡಾರತ್ನಾ ॥ ೮೧ ॥

ಜಾತಸ್ಯ ಮರಣ ತಪ್ಪದು
ಯೇತಕೆ ಚಿಂತಿಸುವೆ ಬರಿದೆ ಹಣೆಯಲಿ ಬರೆದಿರೆ
ಕಾತರಿಸಬೇಡ ಮಾನವ
ಭೀತಿಯ ಬಿಡು ಹರಣದೆಡೆಗೆ ಚೂಡಾರತ್ನಾ ॥ ೮೨ ॥

ಚೂಣಿಯೊಳೀಡಾಡಿದೊಡಂ
ಕೋಣೆಯೊಳಡಗಿರ್ದೊಡಂ ಲಲಾಟ ಲಿಖಿತಂ
ಮಾಣದಿದನರಿದು ಜಾಣಂ
ಪೂಣಿಸಿ ಕಾದುವುದು ರಣದಿ ಚೂಡಾರತ್ನಾ ‖ ೮೩ ‖

ಮೋಹಮದಾವುದು ಧನ ಸ
ಮ್ಮೋಹಂ ಭ್ರಮೆಯಂಧಕಾರವಾವುದು ಯುವತೀ
ಮೋಹಂ ಗತಿಮತಿಯಾವುದು
ಸೋಹಂ ಭಾವಂ ವಿವೇಕ ಚೂಡಾರತ್ನಾ ‖ ೮೪ ‖

ಪಳಿವಾವುದು ಕುಲಭಂಗಂ
ತಿಳಿವಾವುದು ಸಮತೆ ಬಂಧವಾವುದು ಮೋಹಂ
ಕಳವಾವುದನೃತವೆಡರಿಂ
ದುಳಿವಾವುದು ಧೃತಿ ವಿವೇಕ ಚೂಡಾರತ್ನಾ ‖ ೮೫ ‖

ಭೂಷಣವಾವುದು ಘನ ಸಂ
ತೋಷವತಿ ಸ್ನೇಹವಾವುದರಿದರೊಳಿಹ ಸಂ
ಭಾಷಣ ಮತಿಯಾವುದು ಪರ
ದೂಷಣವುಳಿದುದು ವಿವೇಕ ಚೂಡಾರತ್ನಾ ‖ ೮೬ ‖



ಕಣ್ಣೊಳಗಣ ಕರಿಗುಡ್ಡೆಯು
ಸಣ್ಣಹುದೆಂದೆನಲುಬೇಡ ಜಗಮಂ ಕಾಣ್ಬುದು
ತನ್ನೊಳು ವಿವೇಕಮುಳ್ಳೊಡೆ
ಬಿನ್ನಣಮಂ ನೆರೆಯಲೇಕೆ ಚೂಡಾರತ್ನಾ ‖ ೮೭ ‖

ತಾಗಿ ತಲೆಯೊಡೆದ ಬಳಿಕಂ
ಬಾಗುವುದತಿ ಬುದ್ಧಿಯಲ್ಲವದು ಕಾರಣದಿಂ
ತಾಗದ ಪೊಡೆಯದ ಮುನ್ನವ
ನಾಗತವರಿವವನೆ ಜಾಣ ಚೂಡಾರತ್ನಾ ‖ ೮೮ ‖

ಶ್ರೀಯಿಲ್ಲದವನ ರೂಪುಂ
ತಾಯಿಲ್ಲದ ಸುತನು ಸತಿಯುಮಿಲ್ಲದ ನರನುಂ
ಪ್ರಾಯದೊಳಿಲ್ಲದ ಪದಪುಂ
ಮಾಯಾವಿಯ ತೆರನದಲ್ತೆ ಚೂಡಾರತ್ನಾ ‖ ೮೯ ‖

ಒತ್ತುವ ಕೆರ ಹೊಲ್ಲದ ಸತಿ
ಮುತ್ತಿಗೆಗೊಳಗಪ್ಪ ದುರ್ಗಮಧಮನ ಕೆಳೆಯುಂ
ಸತ್ತ್ವರಿಂದತಿಕಷ್ಟದ
ಹತ್ತಿರೆ ಸಾರುವವನೆಗ್ಗ ಚೂಡಾರತ್ನಾ‖ ‖ ೯೦ ‖

ಆರವೆಯಿಲ್ಲದ ಕೆರೆಯಂ
ನೀರಿಲ್ಲದ ಭಾವಿಯರ್ಕನಿಲ್ಲದ ಪಗಲಂ
ಸಾರ ಕಲೆಯಿಲ್ಲದವರಂ
ಸಾರದಿರು ಸೌಖ್ಯವಿಲ್ಲವು ಚೂಡಾರತ್ನಾ ॥ ೯೧ ॥

ಆರುಂ ದುರ್ಜನಕುಪ
ಕಾರಂ ಮಾಡಿದೊಡೆ ಸುಣ್ಣಕಲ್ಗಳ ಬಿಸಿಯ ನಿ
ವಾರಿಪೆನೆಂದದರೊಳು ತ
ಣ್ಣೀರಂ ಪೊಯ್ದಂತೆ ಸುಗುಣ ಚೂಡಾರತ್ನಾ ॥ ೯೨ ॥

ಹಲ್ಲು ವಿಷಂ ಫಣಿಪತಿಗಂ
ಎಲ್ಲ ವಿಷಂ ದುರ್ಜನಂಗದೆಂತೆನೆ ಪೇಳ್ವೆಂ
ಹಲ್ಲಿಂ ಹದುರಿಂ ಸೊಲ್ಲಿಂ
ಕೊಲ್ಲದೆ ಮಾಣ್ದಪನೆ ಸುಜನ ಚೂಡಾರತ್ನಾ ॥ ೯೩ ॥

ಮಸಿ ಬಿಳಿದಹುದೇ ತೊಳೆದೊಡೆ
ವಿಷ ಬಿಡುವುದೆ ಹಾವಿಗೆಷ್ಟು ಹಾಲೂಡಿದೊಡಂ
ವಸುಧೆಯೊಳು ನಾಯ ಬಾಲಂ
ಸಸಿನಹುದೇ ಕಟ್ಟಬಿಡಲು ಚೂಡಾರತ್ನಾ ॥ ೯೪ ॥



ರಕ್ಷಿಪನೆ ತಂದೆ ಹಸಿದರೆ
ಕುಕ್ಷಿಯ ತುಂಬುವಳೆ ತಾಯಿ ಕಡು ದುರ್ಜನರಂ
ಶಿಕ್ಷಿಪನೆ ನೃಪತಿ ಪುರುಷನ
ಪಕ್ಷದೊಳಿಪ್ಪವಳೆ ಸುದತಿ ಚೂಡಾರತ್ನಾ ॥ ೯೫ ॥

ಆರವೆಯ ನೆಳಲು ಪಳ್ಳದ
ನೀರುಂ ಬೆಳದಿಂಗಳುಂ ಪಥಾಶ್ರಮದೆಲರುಂ
ನಾರಿಯರು ಧರಣಿ ಧನವು ವಿ
ಚಾರಿಸೆಯೆಲ್ಲರೊಳು ಸಮವು ಚೂಡಾರತ್ನಾ ॥ ೯೬ ॥

ವಾಣಿಜ್ಯವನತಿ ಕೃಷಿಯಿಂ
ಪ್ರಾಣವನೊಪ್ಪಿಸುವ ಸೇವೆಯಿಂ ಯಾತನೆಯುಂ
ಮಾಣದೆ ಮಾಡಿಸುತಿಪ್ಪುದು
ಗೇಣುದ್ದದ ಹೊಟ್ಟೆಯು ಸಲೆ ಚೂಡಾರತ್ನಾ ॥ ೯೭ ॥

ಸಲಿಲದಿ ವನರುಹಮಿರಲದ
ನಲರಿಸುವಂ ದಿನಪ ತನ್ನ ನಿಜಕರಕಿರಣದಿ
ಜಲ ತಪ್ಪಿದರೊಣಗಿಸುವಂ
ನೆಲೆಗೆಟ್ಟಗಿಷ್ಟರುಂಟೆ ಚೂಡಾರತ್ನಾ ॥ ೯೮ ॥

ಮಜ್ಜಿಗೆಯಿಲ್ಲದವೂಟಂ
ಸಜ್ಜನ ಸತ್ಪಾತ್ರನರಿದು ಕೊಡದನ ದಾನಂ
ದುರ್ಜನರೊಡನೆ ಸಮೇಳಂ
ಹೆಜ್ಜಿಗೆ ಹರಳೊತ್ತಿದಂತೆ ಚೂಡಾರತ್ನಾ ॥ ೯೯ ॥

ಭೂತಿಯೊಳು ರಸವನೊಪ್ಪುವ
ಕೇತಕಿಯೊಳು ಫಲವನೋತ ಸತಿಯೊಳು ರೂಪಂ
ಗೀತದೊಳು ಮಾತನರಸುವ
ದೇತರ ಸಾಹಿತ್ಯ ಸುಜನ ಚೂಡಾರತ್ನಾ ॥ ೧೦೦ ॥

ಲಲನೆಯರು ಬಂದರೆಂದರೆ
ಕೆಲಬಲನಂ ನೋಡಿ ಬೇಗ ಕರೆಸುವರವರಂ
ಸುಲಭವೆನಿಪ್ಪ ಬುಧರಂ
ಸಲೆ ನುಡಿಸರು ಖೂಳ ಜನರು ಚೂಡಾರತ್ನಾ ॥ ೧೦೧ ॥

ಭಾವಿಸೆ ಚಂದ್ರಾನಲನಿಂ
ಬೇವುದರಿಂ ಪ್ರಿಯರ ಸಂಗದಿಂದಗಲ್ವುದರಿಂ
ಭಾವಕಿ ವಿಯೋಗದಿಂದಂ
ಸಾವು ಕರಸೌಖ್ಯ ಸುಕವಿ ಚೂಡಾರತ್ನಾ ॥ ೧೦೨ ॥



ಕೂಟದಲಿ ಕಪಟ ಹೊಲ್ಲಂ
ಊಟದೊಳೆರಡಾಗಿ ಬಡಿಸುತಿಪ್ಪುದು ಹೊಲ್ಲಂ
ನಾಟಿಯುದಯದಲಿ ಪೊಲ್ಲಂ
ತೋಟಿಯು ಕನಸಿನಲಿ ಹೊಲ್ಲ ಚೂಡಾರತ್ನಾ ॥ ೧೦೩ ॥

ಅರಗಿಳಿಯಿಲ್ಲದ ವನಮುಂ
ಗುರುವಿಲ್ಲದ ಮಠವು ಹಿರಿಯರಿಲ್ಲದ ಮನೆಯುಂ
ಗರುವಿಕೆಯಿಲ್ಲದ ಸತಿಯುಂ
ವರವಿಲ್ಲದ ದೇವರೇಕೆ ಚೂಡಾರತ್ನಾ ॥ ೧೦೪ ॥

ಕಾಗೆ ಮೊದಲಾಗಿ ಬಂಧುವ
ನೇಗಯ್ಸಿಯುಂ ಕರೆದೊಡಲ್ಲದೀವುದು ಗುಟುಕಂ
ಶ್ರೀಗಧಿಪನೊಬ್ಬನುಂಬುದು
ಮಾಗದು ಧರಿತ್ರಿಯಲಿ ಪೇಳ್ ಚೂಡಾರತ್ನಾ ॥ ೧೦೫ ॥

ಬೇಕಾದ ದಾನವೊಂದೇ
ಲೋಕದಲುಂಟನ್ನದಾನವದನು ಪಿಡಿಯಲಿ
ನೂಕಲು ಬಪ್ಪುದು ಯಮನಂ
ನಾಕದಲಿರಲಪ್ಪುದಲ್ತೆ ಚೂಡಾರತ್ನಾ ॥ ೧೦೬ ॥

ಪರಹಿತವನೆಸಗಿ ಮುನ್ನಿನ
ದೊರೆಗಳು ಶಿಬಿ ಖೇಚರೇಂದ್ರರೇರರೆ ಭರದೊಳ್
ಸುರಪನ ಸಿರಿಗದ್ದುಗೆಯುಂ
ಪರಹಿತಮುಂ ಮಾಡುವಾಡು ಚೂಡಾರತ್ನಾ ॥ ೧೦೭ ॥

ನಾರಿ ಮನೆಕಳ್ಳಿಯಾದೊಡೆ
ಕೇರಿಯ ತಳವಾರ ಚೋರನಾದೊಡೆ ಮತ್ತಾ
ಭಾರಿಕ ಕೊಂಡೆಯನಾದೊಡೆ
ವೂರೇಳಿಗೆಯಾಗದಿಹುದು ಚೂಡಾರತ್ನಾ ॥ ೧೦೮ ॥

ತಂಬುಲವಿಲ್ಲದ ಮೊಗಮುಂ
ನಂಬುಗೆಯಿಲ್ಲದನ ಹರದು ದೋಷಿಯ ತಪಮುಂ
ಇಂಬರಿಯದವಳೊಳಾಟಂ
ಕುಂಭಿನಿಗದು ಹಾಸ್ಯ ಸುಕವಿ ಚೂಡಾರತ್ನಾ ॥ ೧೦೯ ॥

ದೀನನ ದೊರೆತನದಿಂದಂ
ದಾನಿಯ ಬಡತನವೆ ಲೇಸದಂತೆನೆ ಶರನಿಧಿ
ಪಾನೀಯಕ್ಕೆ ಯೋಗ್ಯವೆ ಸ
ನ್ಮಾನಂ ಚಿಕ್ಕೊರತೆ ಲೇಸು ಚೂಡಾರತ್ನಾ ॥ ೧೧೦ ॥



ಗುಣವರಿಯದ ಚಾತುರ್ಯದ
ಕಣಿಗುರಿಯದ ತನಗೆ ಹಿತವರೆಂಬುದನರಿಯದ
ಬಣಗುಗಳೊಡನಾಟಂ ಸ
ದ್ಗುಣಿಗಳಿಗಿದು ಕಾಳಕೂಟವು ಚೂಡಾರತ್ನಾ ॥ ೧೧೧ ॥

ಸುತರಿಲ್ಲದ ಧನ ಶೂನ್ಯಂ
ಅತಿ ಪ್ರಿಯದ ಬಂಧುವಿಲ್ಲದಾ ಪುರ ಶೂನ್ಯಂ
ಸತಿಯಿಲ್ಲದ ಗೃಹ ಶೂನ್ಯಂ
ಅತಿ ಮೂರ್ಖನ ಹೃದಯಶೂನ್ಯಂ ಚೂಡಾರತ್ನಾ ॥ ೧೧೨ ॥

ಕಟಕಿಯ ನುಡಿವನ ಮಾತಂ
ಕುಟಿಲ ಮಾಡುವಳ ಬೇಟ ಹಾವಿನ ಕೂಟಂ
ಅಟಮುಟಗರೊಡನೆಯಾಟಂ
ದಿಟದಿಂ ದಂಡಿಸಿದರೆ ಕೇಡು ಚೂಡಾರತ್ನಾ ॥ ೧೧೩ ॥

ಸೈರಣೆಯೆಂಬುದು ಮೈಸಿರಿ
ಸೈರಣೆಯುಂ ಜಪತಪವು ದಾನವು ಧರ್ಮಂ
ಸೈರಣೆಯೆ ಶಾಶ್ವತ ಸುಖಂ
ಸೈರಣೆಯೆ ಸಕಲರಿಗೆ ಹಿತ ಚೂಡಾರತ್ನಾ ॥ ೧೧೪ ॥

ಪರವಧುವಿನ ನಗೆ ಹಗೆಯಾ
ಪರವಧುವಿನ ಸರಸ ವಿರಸ ಪರವಧು ಕೆರಹಂ
ನಿರುತಂ ಮೃತ್ಯುವಿನ ಕರಹ
ನೆರವುಂ ನರಕಕೆ ಗಮನಂ ಚೂಡಾರತ್ನಾ ‖ ೧೧೫ ‖

ಯತಿ ಸಿದ್ಧರ ಗತಿಕೆಡಿಸಿತು
ವ್ರತಿ ಮುನಿಗಳ ಭ್ರಾಂತುಗೊಳಿಸಿ ಕಾಡಿತ್ತು ಮಹಾ
ಧೃತಿಗೆಡಿಸಿತು ಗುರುಹಿರಿಯರ
ಸತಿಯರ ವೈಶಿಕದ ಬಲ್ಮೆ ಚೂಡಾರತ್ನಾ ‖ ೧೧೬ ‖

ಹೆಂಡತಿಯ ಮಾತ ಕೇಳಿದ
ಗಂಡಂಗಭಿಮಾನ ಹಾನಿ ರಾಮುಂಗಾಯಿತು
ಮುಂಡೆಯು ಬೋಳಾಯ್ತು ಬಳಿಕ
ಹೆಂಡತಿ ಹೆಡತಲೆಯ ಮೃತ್ಯು ಚೂಡಾರತ್ನಾ ‖ ೧೧೭ ‖

ನುಡಿದೆರಡಂ ನುಡಿವಂಗಂ
ಕೆಡುವುದು ಸಿರಿ ತೇಜವಳಿಗು ಸಂಪದ ತೊಲಗುಂ
ನುಡಿದಂತೆ ನಡೆವವನ ಸಲೆ
ಬಿಡದರಸುತ ಬಹಳು ಲಕ್ಷ್ಮಿ ಚೂಡಾರತ್ನಾ ‖ ೧೧೮ ‖



ಯೌವನದೊಳಗಣ ಸಿರಿಯುಂ
ಯೌವನದೊಳಗಾದ ಮಕ್ಕಳುಂ ವಿದ್ಯಗಳುಂ
ಯೌವನದ ಸೊಬಗು ಪೌರುಷ
ಮುವ್ವಳಿಸಿದರುಂಟೆ ಸುಕವಿ ಚೂಡಾರತ್ನಾ ‖ ೧೧೯ ‖

ಮೊದಲ ರತಿ ಮೊದಲ ನೇಹಂ
ಮೊದಲ ಸರಸಂ ಮೊದಲ ಯೌವನ ಮೇಣ್ ಕಾರ್ಯಂ
ಮೊದಲೊಳಗಲ್ಲದೆ ಕಬ್ಬಿನ
ತುದಿಯೊಳು ರಸವರಸಲುಂಟೆ ಚೂಡಾರತ್ನಾ ‖ ೧೨೦ ‖

ಹರಿ ಹದ್ದಂ ಹರನೆತ್ತಂ
ಸರಸಿಜಭವನಂಚೆಯಂ ಕುಮಾರಂ ನವಿಲಂ
ಪರಶುಧರನಿಲಿಯನೇರಲು
ಅರಸಂಗೇಕಾನೆ ಕುದುರೆ ಚೂಡಾರತ್ನಾ ‖ ೧೨೧ ‖

ಹಾವಸೆಗೆ ಜಲವ ತೊರೆವರೆ
ದೇವಾಂಗವ ನೊಣವಿಗಂಜಿ ತೊರೆದವರುಂಟೇ
ಗಾವಿಲರ ಮಾತ ಕೇಳಿಯೆ
ಸೇವಕರ ತೊರೆದರುಂಟೆ ಚೂಡಾರತ್ನಾ ‖ ೧೨೨ ‖

ಪತಿಯಾಜ್ಞೆಯೊಳಡಗದ ಸತಿ
ಹುತವಹನಂತುರಿವ ಮಂತ್ರಿ ಕೋಪವಡಂಗದ
ಯತಿ ದಯವಿನಿತಿಲ್ಲದ ನೃ
ಪತಿ ಭೂಮಿಗೆ ಭಾರವಲ್ತೆ ಚೂಡಾರತ್ನಾ ॥೧೨೩॥

ಪೊನ್ನಂದಣವುಂ ಸತ್ತಿಗೆ
ರನ್ನದ ಹಾರಂಗಳೊರೆವ ಚಾಮರವಿದಿರೊಳು
ಚನ್ನೆಯರಿಪ್ಪಾ ಸೌಖ್ಯಂ
ಮುನ್ನಂ ನೋನದರಿಗುಂಟೆ ಚೂಡಾರತ್ನಾ ॥೧೨೪॥

———

# ಕಠಿಣ ಪದಗಳ ಅರ್ಥ

●

ಪದ್ಯ ೧. ಎಡರು=ತೊಂದರೆ; ಭವ=ಹುಟ್ಟು, ಜನ್ಮ; ಅಲ್ತೆ=ಅಲ್ಲವೆ.
೩. ಅರಿವು=ವಿವೇಕ.
೪. ಅರಿದು=ಅಸಾಧ್ಯ.
೫. ಲಕ್ಕ=ಲಕ್ಷ (ತ್ಸ).
೬. ಬುಧ=ವಿದ್ವಾಂಸ.
೭. ಮೋದ=ಸವಿ, ಸಂತೋಷಪಡು.
೯. ಅಳವು=ಶಕ್ತಿ.
೧೦. ಚಂದ್ರಾರ್ಕ=ಚಂದ್ರ, ಸೂರ್ಯ.
೧೧. ಕರಡಗೆ=ಭರಣಿ, ಪೆಟ್ಟಿಗೆ.
೧೬. ಪಕ್ಕಲೆ, ಕೊಕ್ಕರಿಕೆ=ಅಸಹ್ಯ.
೨೨. ಪಲ್ಲವಿಸು=ಚಿಗುರು, ಅರಳು.
೨೪. ವ್ರಾತ=ಸಮೂಹ.
೩೪. ಆರಯ್ಯದೆ=ವಿಚಾರಿಸದೆ; ಎಚ್ಚಂತೆ=ಪ್ರಯೋಗಿಸಿದಂತೆ.
೫೭. ಕನಕಾದ್ರಿ=ಮೇರುಪರ್ವತ, ಹಿಮಾಲಯ.
೬೩. ಒಡಮೆ=ಸಂಪತ್ತು.
೬೪. ಶಾಲಿ ಭತ್ತ.
೬೯. ಎಸಕ=ಕಾಂತಿ; ಬಸವಳಿ-ಆಯಾಸಗುಂದು;
ಬಿಸರುಹನೇತ್ರ=ಸೂರ್ಯ.
೭೫. ಚಾಗ=ತ್ಯಾಗ: ಇನತನೂಜ=ಸೂರ್ಯಪುತ್ರ, ಕರ್ಣ.
೭೬. ಸೇಸೆ=ಮಂತ್ರಾಕ್ಷತೆ.
೭೮. ಮೃಡ=ಈಶ್ವರ; ತೊಡೆ=ಅಳಿಸಿಹಾಕು.

೭೯. ವಿಧಾತೃ=ಬ್ರಹ್ಮ.

೮೪. ಮನುಜಾವಳಿ=ಮನುಜ+ಆವಳಿ=ಮನುಷ್ಯರ ಸಮೂಹ.

೮೬. ಹರಣ=ಪ್ರಾಣ

೮೭. ಚೂಣಿ=ಸೈನ್ಯದ ಮುಂಭಾಗ; ಮಾಣ್=ಬಿಡು;
ಪೂಣಿಸಿ=ಭಾಷೆ ತೊಟ್ಟು.

೯೦. ಅರಿದರು=ಬಲ್ಲವರು.

೯೨. ಆಗತ=ಪ್ರಾಪ್ತವಾದ.

೯೩. ಶ್ರೀ=ಸಂಪತ್ತು; ಲಕ್ಷ್ಮಿ; ಪದಪು=ಪ್ರೀತಿ, ಒಲವು.

೯೫. ಆರವೆ=ತೋಟ; ಅರ್ಕ=ಸೂರ್ಯ.

೯೮. ಸಸಿನ=ನೇರ.

೧೦೫. ಕೇತಕಿ=ಕೇದಗೆ ಹೂ; ಓತ=ಪ್ರೀತಿಸಿದ.

೧೧೧. ನಾಕ=ಸ್ವರ್ಗ.

೧೧೪. ಹರದು=ವ್ಯಾಪಾರ; ಇಂಬರಿಯುವಳು=ಇಚ್ಛೆಯರಿಯುದವಳು,
ಕುಂಭಿನಿ=ಲೋಕ, ಒಡನಾಟ=ಪ್ರೀತಿ, ಸಹವಾಸ.

೧೧೮. ಬೇಟ=ಪ್ರೀತಿ.

೧೨೦. ಅವ್ವಳಿಸು=ಚಿಂತಿಸು.

೧೨೨. ಅಂಚೆ=ಹಂಸ, ಕುಮಾರ=ಸ್ಕಂದ, ಕುಮಾರ, ಷಣ್ಮುಖ·
ಪರಶುಧರ ಗಣಪತಿ.

೧೨೩. ಹಾವಸೆ=ಪಾಚಿ, ದೇವಾಂಗ=ರೇಷ್ಮೆ, ಗಾವಿಲ=ದಡ್ಡ.

೧೨೮. ಹುತವಹ=ಅಗ್ನಿ, ಬೆಂಕಿ; ಇನಿತು=ಸ್ವಲ್ಪ.

೧೨೯. ಅಂದಣ=ಪಲ್ಲಕ್ಕಿ; ಸತ್ತಿಗೆ=ಛತ್ರಿ; ನೋನ್=ವ್ರತ:
ನೋನದರು=ವ್ರತಮಾಡದವರು.

---

# ಇತ್ತೀಚಿನ ಪ್ರಕಟನೆಗಳು

***

| | | |
|---|---|---|
| ಮಾಜೀಮಂತ್ರಿ | ಬಸವರಾಜ ಕಟ್ಟೀಮನಿ | ೪·೫೦ |
| ಬೆಂಗಳೂರಿಗೊಂದು ಟಿಕೀಟು | " | ೫·೦೦ |
| ಗೋಡೆಗಳು | ಸುಂದರ ನಾಡಕರ್ಣಿ | ೪·೫೦ |
| ಶಾಲಾ ಆರೋಗ್ಯ ವಿಜ್ಞಾನ | ಬಿ. ಸಿ. ಕಲಾಲ | ೪·೦೦ |
| ಭಾರತೀಯ ವಿಜ್ಞಾನಿಗಳು | ಶಾನಭಾಗ | ೨·೫೦ |
| ಕಾಗದ | ಎಸ್. ವೆಂಕಟೇಶಮೂರ್ತಿ | ೧·೫೦ |
| ಮಾಧವಕರುಣಾವಿಲಾಸ | ಗಳಗನಾಥ | ೨೫·೦೦ |
| ಶ್ರೀರಾಮಕೃಷ್ಣರ ದೃಷ್ಟಾಂತಕಥೆಗಳು | ಕೋ. ಚೆನ್ನಬಸಪ್ಪ | ೬·೦೦ |
| ಭಾರತೀಯ ಶಿಕ್ಷಣದ ಇತಿಹಾಸ | ಪ್ರೊ. ನಂಜುಂಡಸ್ವಾಮಿ | ೪·೦೦ |
| ಹೊಯ್ಸಳರ ಇತಿಹಾಸ | " | ೩·೨೫ |
| ಕೈಗನ್ನಡಿ | (ಜನಪ್ರಿಯ ಹಸ್ತಸಾಮುದ್ರಿಕಶಾಸ್ತ್ರ ಗ್ರಂಥ) | ೪·೦೦ |
| ನಾಕುತಂತಿ | ಅಂಬಿಕಾತನಯದತ್ತ | ೪·೦೦ |
| ಆದರ್ಶ ಮಹಿಳಾರತ್ನಗಳು | ವಾಗೀಶ | ೪·೦೦ |
| ಕವಿರತ್ನಾಕರ ವರ್ಣಿ | ಹೇಮಲತಾ ಪದಕಿ | ೪·೦೦ |
| ಸಿದ್ಧಚಕ್ರ | ಮಿರ್ಜಿ ಅಣ್ಣಾರಾಯ | ೬·೦೦ |
| ಕಾಮನಬಿಲ್ಲು | ಸತ್ಯಕಾಮ | ೪·೦೦ |
| ಮಂಗಳಸೂತ್ರ | ಅ. ನ. ಕೃ. | ೬·೦೦ |
| ಕಣ್ಣೀರು | " | ೪·೦೦ |
| ಕನ್ನಡ ಸಾಹಿತ್ಯ ಸಂಸ್ಕೃತಿ ದರ್ಶನ | ಪ್ರೊ. ಸುಂಕದ | ೧೨·೦೦ |

